# ನಾಲ್ದೆಸೆಯ ನೋಟ

ಲೇಖಕರು :

ಡಾ. ಡಿ. ಎಸ್. ಕರ್ಕಿ, ಎಂ. ಎ., ಪಿಎಚ್. ಡಿ.

ಹುಬ್ಬಳ್ಳಿ



ಸಾಹಿತ್ಯ ಭಾಂಡಾರ

೪ ನೆಯ ಪುಷ್ಪ

ಜನವರಿ ೧೯೫೭ ] [ ಬೆಲೆ : ೧—೮—೦

# ಪ್ರಕಾಶಕರ ಮಾತು

ಕನ್ನಡವು ಪುರಾತನ ಭಾಷೆಗಳಲ್ಲೊಂದಾಗಿದೆ. ಆದರೆ ಇತ್ತೀಚೆಗೆ ಅದರ ಪ್ರಗತಿಯು ತೃಪ್ತಿಕರವಾಗಿ ಸಾಗಿಲ್ಲವೆಂದು ಹಿರಿಯ ಕನ್ನಡಿಗರು ಮರುಗತೊಡಗಿದ್ದಾರೆ. ಉತ್ತಮ ಸಾಹಿತ್ಯ ಕೃತಿಗಳು ಹೊರಬರುತ್ತಿಲ್ಲ; ಜನರಲ್ಲಿ ವಾಚನಾಭಿರುಚಿಯು ಬೆಳೆದು ಬರುತ್ತಿಲ್ಲ. ಲೇಖಕರಿಗೆ ಪ್ರೋತ್ಸಾಹನೆ ಇಲ್ಲ. ವ್ಯಕ್ತಿಗಳಾಗಲೀ ಪುಸ್ತಕದ ವ್ಯಾಪಾರಿಗಳಾಗಲೀ ಸಾಹಿತ್ಯ ಸೇವೆಗಾಗಿ ನಡಕಟ್ಟಿ ನಿಂತ ಉದಾಹರಣೆಗಳು ನಮ್ಮಲ್ಲಿ ತೀರ ಕಡಿಮೆ. ಹೀಗಾಗಿ ಉತ್ತಮ ಬರೆಹಗಾರರಿಗೆ ಉತ್ತೇಜನವನ್ನು ಕೊಡುವ, ಜನತೆಯಲ್ಲಿ ಓದುವ ಅಭಿರುಚಿಯನ್ನು ಹುಟ್ಟಿಸುವ, ಮತ್ತು ಹಳ್ಳಿಗಳಲ್ಲಿಯೂ ಕೂಡ ವಾಚನಾಲಯ ಅಭಿರುಚಿಯನ್ನು ಬೆಳೆಯಿಸುವ ಉದ್ದೇಶಗಳನ್ನೊಳಗೊಂಡ ಒಂದು ಸಂಸ್ಥೆಯನ್ನು ಸಹಕಾರಿ ತತ್ವದ ಮೇರೆಗೆ ಸಂಘಟಿಸಬೇಕೆಂದು ಮುಂಬೈ ರಾಜ್ಯದ ಹಿಂದಿನ ಸಹಕಾರಿ ಮಂತ್ರಿಗಳಾದ ಮಾನ್ಯ ಶ್ರೀ. ಎಂ. ಪಿ. ಪಾಟೀಲ ಅವರು ಮುಂದಾದರು. ಅವರ ಈ ಪ್ರಯತ್ನವೇ ಈಗ ಮೂರ್ತಸ್ವರೂಪವನ್ನು ತಾಳಿ 'ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ ಲಿ. ಧಾರವಾಡ' ಎಂಬ ಅಭಿದಾನದಲ್ಲಿ ಕಾರ್ಯ ಮಾಡುತ್ತಲಿದೆ. ಲೇಖಕರಿಗೆ ಹಣದ ರೂಪದಲ್ಲಿ ಪ್ರೋತ್ಸಾಹಿಸುವ ಉದ್ದೇಶವುಳ್ಳ ಸಂಸ್ಥೆಗಳಲ್ಲಿ ಇದೇ ಮೊದಲನೆಯದು.

ವಿವಿಧ ವಿಷಯಗಳ ಮೇಲೆ ಕೃತಿಗಳನ್ನು ಬರೆಯಿಸಿ ಸದ್ಯಕ್ಕೆ ೧೫೦ ಪುಟಗಳ ನಾಲ್ಕು ಪುಸ್ತಕಗಳನ್ನು ಪ್ರತಿವರುಷ ಒದಗಿಸಲಾಗುವುದು. ಪರಿಸ್ಥಿತಿಯು ಹೆಚ್ಚು ಅನುಕೂಲವಾದಂತೆ ಹೆಚ್ಚೆಚ್ಚು ಪುಸ್ತಕಗಳನ್ನು ಕೊಡಬಹುದು. ಕನ್ನಡ ನಾಡಿನ ಸಾಹಿತ್ಯ ಸಂಸ್ಕೃತಿ, ವಿಜ್ಞಾನ, ಸಮಾಜಶಾಸ್ತ್ರಗಳನ್ನು ಮುಖ್ಯವಾಗಿಟ್ಟುಕೊಂಡು ಗ್ರಂಥಗಳನ್ನು ಬರೆಯಿಸಲಾಗುವದು.

ಪ್ರತಿ ವರುಷ ಯಾವ ಯಾವ ವಿಷಯಗಳ ಬಗೆಗೆ ಪುಸ್ತಕಗಳನ್ನು ಪ್ರಕಟಿಸಬೇಕೆಂಬುದನ್ನು ನಿರ್ಣಯಿಸಿ ಹೆಸರಾದ ಲೇಖಕರಿಂದ ಬರೆಯಿಸಿ, ಅಂತಹ ಲೇಖಕರಿಗೆ ಸಂಭಾವನೆಯನ್ನು ಕೊಡಲಾಗುವದು. ಗ್ರಂಥ ಪ್ರಕಟನೆಯ ಬಗೆಗೆ ಬರಬಹುದಾದ ಆವಶ್ಯಕ ಎಲ್ಲವೆಚ್ಚವನ್ನು, ಸಂಘದ ನಿಯಮಗಳಿಗೆ ಅನುಸರಿಸಿ ಒಟ್ಟಿನ ಆದಾಯದಲ್ಲಿ ಕಳೆದು, ಉಳಿದ ನಿಕ್ಕಿಲಾಭದಲ್ಲಿ ಅರ್ಧದಷ್ಟನ್ನು ಲೇಖಕರಿಗೆ ಕೊಡಲಾಗುವದು. ಅವಶ್ಯಕತೆಯ ಮೇರೆಗೆ ಅವುಗಳ ಎರಡನೆಯ ಹಾಗು ಮುಂದಿನ ಮುದ್ರಣಗಳನ್ನು ಸಹ ಪ್ರಕಟಿಸಲಾಗುವದು. ಆಗಲೂ ಸಹಿತ ಇದೇ ನಿಯಮವು ಅನ್ವಯಿಸುತ್ತದೆ. ಆದರೆ, ಪ್ರಾರಂಭಕ್ಕೆ ಲೇಖಕರಿಗೆ, ಕೈಬರಹದ ಪ್ರತಿಯು ತಲುಪಿ ಸಂಘದಿಂದ ಸ್ವೀಕರಿಸಲ್ಪಟ್ಟಮೇಲೆ, ಕೆಲವೊಂದು ಹಣವನ್ನು ನಿಯಮಗಳಿಗನುಸರಿಸಿ ಮುಂಗಡವಾಗಿಯೂ ಕೊಡಲಾಗುವದು.

ನಮ್ಮ ಮಾಲೆಯ ನಾಲ್ಕನೆಯ ಪುಷ್ಪವಾದ 'ನಾಲ್ದೆಸೆಯ ನೋಟ'ವು ಪ್ರಕಟನೆಗೆ ಈಗ ಸಿದ್ಧವಾಗಿದೆ. ಕನ್ನಡ ನಾಡಿನ ಪ್ರತಿಭಾನ್ವಿತ ಕವಿಗಳೂ ಉತ್ತಮ ಲೇಖಕರೂ ಆದ ಶ್ರೀ. ಡಿ. ಎಸ್. ಕರ್ಕಿ, ಎಂ. ಎ., ಪಿಎಚ್. ಡಿ. ಅವರು ಜೀವನ, ಸಾಹಿತ್ಯ, ಶಿಲ್ಪ, ಪ್ರಕೃತಿಗಳನ್ನು ಕುರಿತು ಹೃದಯಂಗಮವಾಗಿ ಬರೆದ ಬರಹಗಳ ಅಮೂಲ್ಯ ಸಂಗ್ರಹವೇ 'ನಾಲ್ದೆಸೆಯ ನೋಟ' ವಾಗಿದೆ. ನಾಡು ಹಾಗು ನಾಡವರ ವೈಭವದ ದಿಗ್ದರ್ಶವನ್ನು ಇದರಲ್ಲಿ ಓದುಗರು ಕಾಣಬಹುದಾಗಿದೆ.

ಇಂಥ ಸಂಸ್ಥೆಗಳ ಘನವಾದ ಉದ್ದೇಶಗಳು ಸಫಲವಾಗಬೇಕಾದರೆ ಲೇಖಕರ ಮತ್ತು ಸಂಘ ಸಂಸ್ಥೆಗಳ ಸಹಕಾರವು ಅತ್ಯವಶ್ಯ. ಕನ್ನಡಿಗರೆಲ್ಲರೂ ಚಂದಾದಾರರಾಗಿ, ಶೇರುದಾರರಾಗಿ ಪ್ರೋತ್ಸಾಹಿಸಬೇಕು.

ಈ ಸಂಘದ ಶೇರುದಾರರಾಗ ಬೇಕಾದರೆ ಕನಿಷ್ಟ ೨೫ ರೂ. ಗಳ ಒಂದು ಶೇರನ್ನು ಕೊಳ್ಳಬೇಕಾಗುವದು. ಮತ್ತು ಒಂದು ರೂಪಾಯಿ ಪ್ರವೇಶಧನವನ್ನು ಕಳಿಸಬೇಕಾಗುವದು. ಸದಸ್ಯರಾಗಿದ್ದು ಚಂದಾದಾರರಾಗ ಬಯಸುವವರು ೫ ರೂ. ಗಳನ್ನು ಪ್ರತಿವರುಷ ಕೊಡಬೇಕಾಗುವದು.

ಸದಸ್ಯತ್ವವಿಲ್ಲದೆ ಚಂದಾದಾರರಾಗ ಬಯಸುವವರು ಪ್ರತಿವರುಷ ೬ ರೂ. ಗಳನ್ನು ಚಂದಾಹಣವೆಂದು ಕೊಡಬೇಕಾಗುವದು. ಈ ಬಗೆಗೆ ಕನ್ನಡಿಗರೆಲ್ಲರೂ ಸಹಕರಿಸಬೇಕೆಂದು ಬಿನ್ನಹ.

ನಮ್ಮ ಕರೆಗೆ ಓಗೊಟ್ಟು ಈ ಗ್ರಂಥವನ್ನು ಸಿದ್ಧಪಡಿಸಿಕೊಟ್ಟ ಡಾ. ಡಿ. ಎಸ್. ಕರ್ಕಿ, ಅವರಿಗೆ ನಾವು ತುಂಬಾ ಋಣಿಯಾಗಿದ್ದೇವೆ. ಈ ಪುಸ್ತಕವನ್ನು ಅಲ್ಪವೇಳೆಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ರವೀಂದ್ರ ಮುದ್ರಣಾಲಯ, ಧಾರವಾಡ, ಅವರಿಗೂ ನಾವು ಉಪಕೃತರಾಗಿದ್ದೇವೆ.

ಗುಣ ಮತ್ತು ಗಾತ್ರದಲ್ಲಿ ಉತ್ತಮ ಸಾಹಿತ್ಯ ಕೃತಿಗಳನ್ನು ಅಲ್ಪಬೆಲೆಯಲ್ಲಿ ಪ್ರಕಟಿಸುವ ಉದ್ದೇಶವುಳ್ಳ ನಮ್ಮ ಸಂಸ್ಥೆಗೆ, ಈಗಾಗಲೇ ಚಂದಾದಾರರಾಗಿ ಅನೇಕ ಮಹನೀಯರು ಮತ್ತು ಸಂಘ ಸಂಸ್ಥೆಗಳು ನೀಡಿರುವ ನೆರವನ್ನು ನಾವು ಮರೆಯುವಂತಿಲ್ಲ. ಕನ್ನಡಿಗರು ಈ ಪ್ರಕಟನೆಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸುವರೆಂದು ಆಸಿಸುತ್ತೇವೆ.

ಧಾರವಾಡ
ದಿ. ೨೬-೧-೧೯೫೭

ಡಾ. ಶಿ. ಚೆ. ನಂದಿಮಠ
ಕಾರ್ಯಾಧ್ಯಕ್ಷರು
ಸಂಪಾದಕ ಮಂಡಳ

ಶ್ರೀ. ವ್ಹಿ. ಎಸ್. ಬಸವನಾಳ
ಕಾರ್ಯಾಧ್ಯಕ್ಷರು
ಸಂಚಾಲಕ ಸಮಿತಿ

# ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ, ಲಿ., ಧಾರವಾಡ

## ಸಂಪಾದಕ ಸಮಿತಿ

೧ ಮಾನ್ಯ ಶ್ರೀ. ಮಲ್ಲನಗೌಡರು ಪಾಟೀಲ, ಬಿ. ಎ., ಎಲ್‌ಎಲ್. ಬಿ.
ಕಂದಾಯ ಮಂತ್ರಿಗಳು, ಬೆಂಗಳೂರ.

೨ ಡಾ. ಎಸ್. ಸಿ. ನಂದೀಮಠ, ಎಂ. ಎ., ಪಿಎಚ್. ಡಿ. (ಲಂಡನ್),
ಪ್ರಿನ್ಸಿಪಾಲ, ಬಸವೇಶ್ವರ ಕಾಲೇಜ, ಬಾಗಲಕೋಟ (ಚೇರಮನ್).

೩ ಪ್ರಿ. ವಿ. ಕೆ. ಗೋಕಾಕ, ಎಂ. ಎ., ಆಕ್ಸಫರ್ಡ,
ಪ್ರಿನ್ಸಿಪಾಲ ಕರ್ನಾಟಕ ಕಾಲೇಜ, ಧಾರವಾಡ.

೪ ಪ್ರೊ. ಎಸ್. ಎಸ್. ಮಾಳವಾಡ, ಡಾಯರೆಕ್ಟರ, ಕನ್ನಡ ರಿಸರ್ಚ
ಇನ್‌ಸ್ಟಿಟ್ಯೂಟ, ಧಾರವಾಡ.

೫ ಶ್ರೀ. ವ್ಹಿ. ಎಸ್. ಬಸವನಾಳ, ಬಿ. ಎ., ಎಲ್‌ಎಲ್. ಬಿ.
ಸಂಪಾದಕರು, "ಜಯಕರ್ನಾಟಕ", ಧಾರವಾಡ.

## ಚಾಲಕರ ಸಮಿತಿ

ಚೇರಮನ್ :

೧ ಶ್ರೀ. ವ್ಹಿ. ಎಸ್. ಬಸವನಾಳ, ಚೇರಮನ್ ಕೆ. ಸಿ. ಸಿ. ಬ್ಯಾಂಕ ಲಿ. ಧಾ.

ಸದಸ್ಯರು :

೨ ಡಾ. ಎಸ್. ಸಿ. ನಂದಿಮಠ, ಎಂ. ಎ., ಪಿಎಚ್. ಡಿ. (ಲಂಡನ್).

೩ ಶ್ರೀ. ಪಿ. ಬಿ. ಉಗರಗೋಳ, ಬಿ. ಎ., ಎಲ್‌ಎಲ್. ಬಿ., ಬೆಳಗಾವ.

೪ ಶ್ರೀ. ಎಸ್. ಪಿ. ಪಂಡಿತ, ಬಿ. ಎ., ಎಲ್‌ಎಲ್. ಬಿ.,
ಚೇರಮನ್, ದಿ. ಸಿ. ಸಿ. ಬ್ಯಾಂಕ ಲಿ., ಶಿರ್ಸಿ (N. K.)

೫ ರಜಿಸ್ಟ್ರಾರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬ ಶ್ರೀ. ಎಸ್. ಬಿ. ಹುಬಳಿ, ಆಯ್. ಎ. ಎಸ್. (Retd). ಬೆಳಗಾಂವ

೭ ಶ್ರೀ. ಎಂ. ಪಿ. ನಾಡಗೌಡ, ಬಿ. ಎ., ಎಲ್‌ಎಲ್. ಬಿ.
ಚೇರಮನ್, ಡಿ. ಸಿ. ಸಿ. ಬ್ಯಾಂಕ ಲಿ., ವಿಜಾಪೂರ.

೮ ಶ್ರೀ. ಎಸ್. ಎಂ. ಮಲ್ಲನಗೌಡರ, ಗೌ. ಕಾರ್ಯದರ್ಶಿ,
ಕರ್ನಾಟಕ ಡಿವಿಜನಲ್ ಕೋ-ಆಪ್. ಬೋರ್ಡ, ಧಾರವಾಡ.

೯ ಅಸಿಸ್ಟಂಟ ರಜಿಸ್ಟ್ರಾರ, ಸಿ. ಎಸ್., ಧಾರವಾಡ.

ಶ್ರೀ. ಎಸ್. ವ್ಹಿ. ಕಡೂರ, ಎಂ. ಎ., ಎಫ್. ಆರ್. ಇ. ಎಸ್.,
ಸೆಕ್ರೆಟರಿ, ಕ. ಸ. ಸಾಹಿತ್ಯ ಸಂಘ ಲಿ., ಧಾರವಾಡ.

# ಮೊದಲ ಮಾತು

ನನ್ನ ಕಣ್ಣಿಗೆ ನಿಲುಕಿದ ನೋಟದಲ್ಲಿ ಜೀವನ, ಪ್ರಕೃತಿ, ಕಲೆ, ಕಾವ್ಯ ಹೀಗೆ ನಾಲ್ಕು ನಿಟ್ಟುಗಳನ್ನು ಕಲ್ಪಿಸಿ ಅವುಗಳನ್ನು ಒಟ್ಟಾಗಿ ಇಲ್ಲಿ ನಾಲ್ದೆಸೆಯ ನೋಟ ಎಂಬ ಹೆಸರಿನಿಂದ ಕರೆದಿದ್ದೇನೆ. ಜೀವನ ಎಂಬ ಭಾಗದಲ್ಲಿ ಜೀವನದ ಸಿದ್ಧತೆಯನ್ನು ಸೂಚಿಸುವ ಶಿಕ್ಷಣವೂ ಅಲ್ಲಲ್ಲಿ ಸಮಾವೇಶವಾಗಿದೆ. ಜೀವನ, ಪ್ರಕೃತಿ, ಕಲೆ, ಸಾಹಿತ್ಯ ಇವು ಇದೇ ಕ್ರಮದಲ್ಲಿ ಇರಬೇಕೆಂದು ನಿರ್ಧರಿಸಿ ನಾನು ಆ ಕ್ರಮವನ್ನು ಅನುಸರಿಸಿಲ್ಲ. ಅನುಕೂಲತೆಗಾಗಿ ಈ ಕ್ರಮವನ್ನು ಅನುಸರಿಸಿದ್ದೇನೆ. ಒಂದು ದೃಷ್ಟಿಯಿಂದ ಕಲೆ ಮತ್ತು ಸಾಹಿತ್ಯ ಬೇರೆ ಬೇರೆ ಅಲ್ಲ. ಸಾಹಿತ್ಯವೂ ಕಲೆಯ ಒಂದು ಅಂಗವಾಗಿರುವದರಿಂದ ಅದನ್ನು ಕಲೆಯಲ್ಲಿ ಸಮಾವೇಶ ಗೊಳಿಸಬಹುದಾಗಿದ್ದಿತು. ಆದರೆ ಕಲೆ ಮತ್ತು ಸಾಹಿತ್ಯ ಇವುಗಳನ್ನು ಪ್ರತ್ಯೇಕಿಸಿ ಹೇಳುವ ರೂಢಿ ಹೇಗೋ ಬೆಳೆದು ಬಂದಿದೆ. ಮೇಲಾಗಿ ಅವುಗಳನ್ನು ಪ್ರತ್ಯೇಕಿಸಿ ಹೇಳುವುದು ಅನುಕೂಲವೆಂದು ಹಾಗೆ ಮಾಡಿದ್ದೇನೆ.

ಈ ನಾಲ್ಕೂ ನಿಟ್ಟುಗಳನ್ನು ನೋಡಿದ ದೃಷ್ಟಿ ಒಂದೇ. ಆದುದರಿಂದ ಅವುಗಳನ್ನು ತೋರಿಸುವಾಗ ಒಂದೇ ದೃಷ್ಟಿ ಅಲ್ಲಲ್ಲಿ ಗೋಚರಿಸಿದರೆ ಆಶ್ಚರ್ಯಪಡಬೇಕಿಲ್ಲ. ನಾವು ಬೆಳೆಯಿಸಿಕೊಂಡು ಬಂದ ದೃಷ್ಟಿಗನುಸಾರ ವಾಗಿ ಸೃಷ್ಟಿ ಗೋಚರವಾಗುತ್ತದೆ. ಸೃಷ್ಟಿ ಗೋಚರಿಸಿದಂತೆ ಅದರ ವಿವರಣೆ ನಡೆಯುತ್ತದೆ. ಜೀವನವನ್ನು ನೂರಕ್ಕೆ ನೂರರಷ್ಟು ಇದ್ದಕ್ಕಿದ್ದಂತೆ ನೋಡು ವುದು ಸಾಧ್ಯವಿಲ್ಲ ಎಂದು ನನಗೆ ಅನಿಸಿದೆ. ನೋಡುವವನ ದೃಷ್ಟಿಕೋನವು ಅವನ ನೋಟವನ್ನು ನಿರ್ಧರಿಸುತ್ತದೆ ಎಂಬ ಮಾತನ್ನು ಯಾರೂ ಅಲ್ಲಗಳೆಯಲಾರರು. ಆದರೂ ನಮ್ಮ ನಮ್ಮ ನೋಟ ತೀರ ಬೇರೆ ಬೇರೆ ಆಗದು. ಏಕೆಂದರೆ ನಮ್ಮೆಲ್ಲರಿಗೂ ಸರ್ವಸಾಧಾರಣವಾದುದೇನೋ ಇದೆ. ಅದು ನಮ್ಮೆಲ್ಲರ ಅನುಭವಗಳ ಹೊಂದಿಕೆಗೆ ಕಾರಣವಾಗುತ್ತದೆ. ಆದುದ-

ರಿಂದಲೇ ನಾವು ಪರಸ್ಪರರನ್ನು ಅರ್ಥಮಾಡಿಕೊಳ್ಳುತ್ತೇವೆ. ಹಾಗೆ ಅರ್ಥ ಮಾಡಿಕೊಳ್ಳಲು ಆಸ್ಪದವಿಲ್ಲದಿದ್ದರೆ ಪ್ರಪಂಚದ ಕೀಲೇ ತಪ್ಪಿ ಹೋದೀತು.

ಈ ಸಂದರ್ಭದಲ್ಲಿ ಗದ್ಯಶೈಲಿಯ ಬಗೆಗೆ ಸಾಮಾನ್ಯವಾಗಿ ಹಾಗು ನಮ್ಮ ಕನ್ನಡದಲ್ಲಿ ರೂಪುಗೊಂಡಿರುವ ಮತ್ತು ರೂಪುಗೊಳ್ಳಬೇಕಾದ ಗದ್ಯಸಾಹಿತ್ಯದ ಬಗೆಗೆ ವಿಶಿಷ್ಟವಾಗಿ ನಾಲ್ಕು ಮಾತು ಹೇಳಿದರೆ ಅಪ್ರಸ್ತುತ ವಾಗಲಾರದೆಂದು ಭಾವಿಸಿದ್ದೇನೆ.

ಗದ್ಯಸಾಹಿತ್ಯ ಹಾಗು ಶೈಲಿಗಳ ಸಂಬಂಧದಲ್ಲಿ ನಮ್ಮಲ್ಲಿ ಕೆಲವರಿಗೆ ತಪ್ಪು ತಿಳುವಳಿಕೆಯಾಗದೆ ಇಲ್ಲ. ಆ ತಪ್ಪು ತಿಳುವಳಿಕೆಯನ್ನು ಮಾಡಿ ಕೊಡಲು ಕಾರಣರಾದವರು ನಮ್ಮ ಕೆಲವು ಸಾಹಿತಿಗಳೇ ಎಂದು ಕಾಣುತ್ತದೆ. ಸಾಹಿತ್ಯವೆಂದರೆ ಆಡಂಬರದ ಶೈಲಿ ಎಂಬುದೇ ಆ ತಪ್ಪು ತಿಳುವಳಿಕೆ.

ಸಾಹಿತ್ಯವು ಬರಿ ಬಣ್ಣದ ಬುಗ್ಗೆಯಲ್ಲ. ಗದ್ಯ ಸಾಹಿತ್ಯವಂತೂ ಕೇವಲ ಬಣ್ಣದ ಬುಗ್ಗೆಯಾಗಕೂಡದು. ಗದ್ಯ ಸಾಹಿತ್ಯದ ತಿರುಳು ಜೀವನಾನುಭವ, ಜೀವನ ವಿಮರ್ಶೆ, ಜೀವನ ತತ್ವ. ಅನುಭವದ ಅಭಿವ್ಯಕ್ತಿಗಾಗಿ, ತತ್ವದರ್ಶನಕ್ಕಾಗಿ ಶೈಲಿಯೇ ಹೊರತು, ಅದಕ್ಕೆ ಪ್ರತ್ಯೇಕವಾದ ನೆಲೆಯಿಲ್ಲ. ಉತ್ತಮವಾದ ಗದ್ಯಸಾಹಿತ್ಯದಲ್ಲಿ ಪ್ರಾಮಾಣಿಕವಾದ ಅನುಭವಕ್ಕೆ ಹೊಂದಿಕೆ ಯಾಗುವ ಶೈಲಿ ತಾನಾಗಿಯೇ ರೂಪುಗೊಳ್ಳುತ್ತದೆ ರೂಪುಗೊಳ್ಳಬೇಕು. ಮನದ ಇಂಗಿತವನ್ನು ನಿಚ್ಚಳವಾಗಿ ತಿಳಿಸಿದಾಗಲೇ ಶೈಲಿಗೆ ಬೆಲೆ ಬರುತ್ತದೆ. ಶೈಲಿಯೆಂದರೆ ಶಬ್ದಾಡಂಬರವಲ್ಲ; ಪೊಳ್ಳು ವಸ್ತುವಿನ ಸುತ್ತ ಆಕರ್ಷಕವಾಗಿ ಹೆಣೆದ ಶಬ್ದಜಾಲವಲ್ಲ.

ನಮ್ಮ ಮನದಲ್ಲಿ ಮೂಡಿದ ಬೆಳಕನ್ನು ಇತರರ ಮನಕ್ಕೆ ಬೀರ ಬೇಕಾದಾಗ ಅನಾವಶ್ಯಕವಾದ ಸಿಂಗಾರವು ಒಂದು ಹೊರೆಯಾಗಿ ಪರಿಣಮಿಸಬಹುದು. ಗದ್ಯಶೈಲಿ 'ನಿರಾಭರಣ ಸುಂದರಿ'ಯಾದಷ್ಟು ಒಳಿತೆಂದು ತೋರುತ್ತದೆ. ಗದ್ಯಕ್ಕೆ ಸಾಮಾನ್ಯವಾಗಿ ಬೇಕಾದುದು ಸರಳತನ. ಲಲಿತ ಪ್ರಬಂಧಗಳ ಸಂಬಂಧದಲ್ಲಿ ಮಾತ್ರ ಸಿಂಗಾರ ಹೊಂದಿಕೆಯಾಗಬಹುದು. ವಿಷಯ ವಿವೇಚನೆಗೆ ಭಾಷೆ ಒಂದು ಹೊರೆಯಾಗದಂತೆ ನೋಡಿಕೊಳ್ಳುವ ಎಚ್ಚರ ಎಷ್ಟಿದ್ದರೆ ಅಷ್ಟು ಒಳಿತು. ಜೋಕೆ ತೂಕ ತಪ್ಪಿದ ಭಾಷಾ ಸರಣಿ ಯಲ್ಲಿ ವಿಚಾರ ತೇಲುವುದಕ್ಕಿಂತ ಮುಳುಗಿ ಹೋಗುವುದೇ ಹೆಚ್ಚು.

ನಮ್ಮ ಗದ್ಯಶೈಲಿ ಸರಿಯಾಗಿ ರೂಪುಗೊಳ್ಳಬೇಕಾದರೆ ನಮ್ಮ ಜೀವನಾನುಭವ, ಜೀವನ ವಿಮರ್ಶೆ, ಜೀವನ ದರ್ಶನ ಇವು ಹೆಚ್ಚಾಗಬೇಕೆಂದು ತೋರುತ್ತದೆ. ಸ್ವತಃ ವಿಚಾರಮಾಡುವ ಪ್ರವೃತ್ತಿಯಿಂದ, ಕುತೂಹಲಪ್ರವೃತ್ತಿಯನ್ನು ಅನುಸರಿಸಿ ನಡೆಯುವ ಸಂಶೋಧನೆಯಿಂದ, ಪರಿಸರದ ಸಜೀವ ಸಂಪರ್ಕದಿಂದ, ಗ್ರಂಥಗಳ ಅಭ್ಯಾಸದಿಂದ ಜ್ಞಾನಾರ್ಜನೆಯಾಗುತ್ತದೆ. ಎಲ್ಲೆಲ್ಲಿ ಯಾವ ಯಾವ ರೀತಿಯಲ್ಲಿ ಜ್ಞಾನ ದೊರೆಯಬಹುದೋ ಅಲ್ಲಿಂದ ಅದನ್ನು ಸಂಗ್ರಹಿಸಿ ತನ್ನ ದೃಷ್ಟಿಯನ್ನು ಅವಲಂಬಿಸಿ ಉಂಟಾಗುವ ಅನುಭವದ ಬೆಳಕಿನಲ್ಲಿ ಅದನ್ನು ಪರೀಕ್ಷಿಸಿ, ಸ್ವೀಕರಿಸಿ, ಮೈಗೂಡಿಸಿಕೊಂಡು ಅದನ್ನು ಬರೆವಣಿಗೆಗೆ ಇಳಿಸುವ ಕಾರ್ಯ ಸ್ವಲ್ಪ ಶ್ರಮ ವಹಿಸುವವರಿಗೆ ಮಾತ್ರ ಸಾಧ್ಯವಾಗುವ ಕಾರ್ಯ. ಅಂಥ ಶ್ರಮ, ಅಂಥ ಕಾರ್ಯ ಈ ಲೇಖನಗಳಲ್ಲಿ ಇದು ಎಂದು ಹೇಳಲಾರೆ. ಅಂಥ ಕಾರ್ಯವನ್ನು ಸಾಧಿಸಬೇಕೆಂಬ ಹಂಬಲ ನನಗಿದೆ; ಅದೇ ಒಂದು ಸಮಾಧಾನ.

ಪ್ರಪಂಚದಲ್ಲಿ ಇಂದು ಜ್ಞಾನದ ಕ್ಷೇತ್ರ ಬಹಳ ವಿಸ್ತಾರವಾಗಿದೆ. ವಿಜ್ಞಾನ ಪ್ರಪಂಚವನ್ನಷ್ಟೇ ತೆಗೆದುಕೊಂಡರೂ ಅದರಲ್ಲಿ ಬೆಳೆದ ಜ್ಞಾನ ಅಪಾರವಾಗಿದೆ. ಅದನ್ನು ಕನ್ನಡದಲ್ಲಿ ಒದಗಿಸುವ ಪ್ರಯತ್ನ ನಡೆದಂತೆ ಕನ್ನಡದಲ್ಲಿ ಗದ್ಯ ಸಾಹಿತ್ಯ ವಿಪುಲವಾಗಿ ರಚಿತವಾಗಬಹುದು; ಕನ್ನಡ ಗದ್ಯಶೈಲಿ ನಿಚ್ಚಳವಾಗಬಹುದು. ಅಂಥ ಒಂದು ಸುಯೋಗವನ್ನು ಎದುರು ನೋಡದವರಾರು. ?

ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ ಲಿ. ಧಾರವಾಡ ಅವರು ನನ್ನ ಈ ಪ್ರಬಂಧ ಗ್ರಂಥವನ್ನು ಮನ್ನಿಸಿ, ಸ್ವೀಕರಿಸಿ ಅಂದವಾಗಿ ಅಚ್ಚು ಮಾಡಿ ಬೆಳಕಿಗೆ ತಂದುದಕ್ಕಾಗಿ ಅವರಿಗೆ ಕೃತಜ್ಞತೆಯನ್ನು ಸಲ್ಲಿಸುವುದು ನನ್ನ ಕರ್ತವ್ಯ. ಇದರಲ್ಲಿಯ ಪ್ರಬಂಧಗಳನ್ನು ಕನ್ನಡಿಗರು ಓದಿ ನಲಿದರೆ ನನ್ನ ಕೃತಿ ಸಾರ್ಥಕವಾದಂತೆ ಎಂದು ನಾನು ಭಾವಿಸಿದ್ದೇನೆ.

ಹುಬ್ಬಳ್ಳಿ
೧-೧-೧೯೫೭

—ಡಿ. ಎಸ್. ಕರ್ಕಿ

# ನಿಟ್ಟು ಒಂದು

## ಜೀವನ

# ರೂಪ ರೇಷೆ



**ಜೀವನದ ಕಲ್ಪನೆ :**

ಜೀವನವು ಇಂತು ಎಂದು ಹೇಳುವುದು ಕಷ್ಟ. ಅಷ್ಟು ವಿವಿಧವಾಗಿದೆ ಜೀವನ ಅಷ್ಟು ವಿಶಾಲವಾಗಿದೆ. ಜೀವನದಲ್ಲಿ ನಮಗಾಗುವ ಅನುಭವಗಳು ಬೇರೆ, ಬೇರೆ. ಏಕೆಂದರೆ ನಾವೆಲ್ಲರೂ ಒಂದೇ ಸನ್ನಿವೇಶದಲ್ಲಿ ಜೀವಿಸುವುದಿಲ್ಲ, ನಮ್ಮ ಕಾರ್ಯರಂಗಗಳು ಅನೇಕ. ಅದರಂತೆ ನಮ್ಮ ದೃಷ್ಟಿಗಳು ವಿವಿಧ. ವಿಜ್ಞಾನಿಯು ಜೀವನವನ್ನು ನೋಡುವ ದೃಷ್ಟಿಯೇ ಬೇರೆ; ಕಲಾವಿದನು ನೋಡುವ ದೃಷ್ಟಿಯೇ ಬೇರೆ; ಜೀವನದ ಬಗೆಗೆ ಬಡವನಿಗೆ ಆಗಬಹುದಾದ ಕಲ್ಪನೆಯು ಒಂದಾದರೆ ಬಲ್ಲಿದನಿಗಾಗಬಹುದಾದ ಕಲ್ಪನೆ ಇನ್ನೊಂದು ಸುಶಿಕ್ಷಿತನು ಮಾಡಿಕೊಳ್ಳಬಹುದಾದ ಜೀವನದ ಅರ್ಥ ಒಂದಾದರೆ ಅಶಿಕ್ಷಿತನು ಮಾಡಿಕೊಳ್ಳಬಹುದಾದ ಜೀವನದ ಅರ್ಥ ಬೇರೆ. ಈ ವಿವಿಧ ರಂಗಗಳ ವಿವಿಧ ಸನ್ನಿವೇಶಗಳ ಪ್ರಭಾವವಂತಿರಲಿ; ಒಂದೇ ರಂಗದಲ್ಲಿ, ಒಂದೇ ಸನ್ನಿವೇಶದಲ್ಲಿ ಜೀವಿಸುವ ಇಬ್ಬರು ವ್ಯಕ್ತಿಗಳ ಜೀವನ-ಕಲ್ಪನೆಯು ಸಂಪೂರ್ಣ ಒಂದೇ ಆಗಿರಲಾರದು; ಆದುದರಿಂದಲೇ ಜೀವನ ಅಷ್ಟು ವಿವಿಧ ವಾಗಿದೆ; ಅಷ್ಟು ವಿಸ್ತಾರವಾಗಿದೆ. ಅದೇ ಜೀವನದ ಸೌಭಾಗ್ಯ.

ಜೀವನವೊಂದು ಸಂತತವಾಗಿ ಪ್ರವಹಿಸುವ ಪ್ರವಾಹ. ಅದರಲ್ಲಿ ಹಳೆಯ ನೀರು ಯಾವುದು ಹೊಸ ನೀರು ಯಾವುದು ಎಂದು ವಿಂಗಡಿಸಿ ಹೇಳುವುದು ಹೇಗೆ? ಪ್ರಾಕ್ತನಕೆ ನೂತನವು ಬೆರೆಯುತ್ತಲಿರುವುದರಿಂದಲೇ

ಜೀವನವು ಸ್ವಾರಸ್ಯಪೂರ್ಣವಾಗುತ್ತಲಿದೆ. ಈ ಮಾತನ್ನು ಕವಿ ಡಿ. ವಿ. ಗುಂಡಪ್ಪನವರು ಸುಂದರವಾಗಿ ಹೀಗೆ ಹೇಳಿದ್ದಾರೆ.

ಪೊಸರಸಂ ಬೇರಿ... ಧರೆಯಿಂದ
ಸಸಿಗೆ ಹೊಸ ತಳಿರ ತಲೆಯುಲಿ ಮುಡಿಸುವಂತೆ-
ಹೊಸ ಸೃಷ್ಟಿ ಸತ್ವಮೆತ್ತಣಿನೊ ಬರುತನುದಿನಂ
ಪೊಸತಾಗಿಪುದು ಜಗವ- ಮಂಕುತಿಮ್ಮ.

ಜೀವನವನ್ನು ಕುರಿತು ರೂಪಕಗಳೆಷ್ಟೋ ಬಳಕೆಗೊಂಡಿವೆ; ಬೆಳಕಿಗೆ ಬಂದಿವೆ. ಜೀವನವನ್ನು ವೃಕ್ಷವೆಂದು ಕಲ್ಪಿಸಿ ಜನರು ಅದರೊಳಗಿನ ಹಕ್ಕಿಗಳೆಂದು ತಿಳಿಯುವುದುಂಟು; ಜೀವನವನ್ನು ಪ್ರಯಾಣಕ್ಕೋ ಯಾತ್ರೆಗೋ ಹೋಲಿಸಿ ಜೀವಿಗಳನ್ನು ಯಾತ್ರಿಕರೆಂದೋ ಪಯಣಿಗರೆಂದೂ ಭಾವಿಸ್ಸುವುದುಂಟು. ಆದುದರಿಂಗಲೇ 'ಜೀವನ ಯಾತ್ರೆ', 'ಜೀವನ ಪಥ' ಎಂಬ ಪ್ರಯೋಗಗಳು ರೂಢವಾಗಿವೆ. ಅನಂತವಾಗಿ ಸಾಗಿರುವ ಸರ್ವಸಾಮಾನ ಜೀವನವನ್ನು ಒಂದು ಪ್ರವಾಹಕ್ಕೆ ಹೋಲಿಸಿದರೆ ವೈಯಕ್ತಿಕ ಜೀವನವನ್ನು ಆ ಪ್ರವಾಹದಲ್ಲಿ ಸಾಗುವ ಒಂದು ನೌಕೆಯೆಂದು ತಿಳಿಯುವ ಪರಿಣಾಮವಾಗ್ನಿ ಜೀವನ ನೌಕೆ ಎಂಬ ಕಲ್ಪನೆಯು ಅವತರಿಸಿದೆ. ಕುವೆಂಪು ಅವರ ಡೋಣಿ ಹಾಡು ಈ ಕಲ್ಪನೆಯನ್ನು ಸರಸವಾಗಿ ಚಿತ್ರಿಸುತ್ತದೆ.

ದೋಣಿ ಸಾಗಲಿ, ಮುಂದೆ ಹೋಗಲಿ ದೂರ ತೀರವ ಸೇರಲಿ
ಬೀಸುಗಾಳಿಗೆ ಬೀಳುತೇಳುತ ತೆರೆಯು ಮೇಗಡೆ ಹಾರಲಿ
* * * *

ದೂರ ಬೆಟ್ಟದ ಮೇಲೆ ತೇಲುವ ಬಿಳಿಯ ಮೋಡವ ನೋಡಿರಿ
ಅದನೆ ಹೋಲುತ ಅಂತೆ ತೇಲುತ ದೋಣಿಯಾಟವನಾಡಿರಿ
ನಾವು ಲೀಲಾ ಮಾತ್ರ ಜೀವರು ನಮ್ಮ ಜೀವನ ಲೀಲೆಗೆ
ನಿನ್ನೆ ನಿನ್ನೆಗೆ ಇಂದು ಇಂದಿಗೆ, ಇರಲಿ ನಾಳೆಯು ನಾಳೆಗೆ

ಜೀವನವು ಗರಡಿಯೆಂಬ ಹಾಗು ಜೀವಿ ಆ ಗರಡಿಯಲ್ಲಿ ಪಳಗುವ ಮಲ್ಲನೆಂಬ ಭಾವನೆಯೂ ಅಲ್ಲಲ್ಲಿ ವ್ಯಕ್ತವಾಗಿದೆ. "ನಾನೊಬ್ಬ ಮಲ್ಲನೀ ಜೀವನದ ಗರಡಿಯಲ್ಲಿ" ಎಂದು ಕವಿ ಕುವೆಂಪು ಮಲ್ಲಗೀತವನ್ನು ಹಾಡಿದ್ದಾನೆ.

## ಜೀವನ- ನಾಯಕ:

ಜೀವನದ ಬಗೆಗೆ ಕಲ್ಪನೆ ಏನೇ ಇರಲಿ; ಅದರ ಸಂಪೂರ್ಣ ಅರ್ಥ ತಿಳಿಯಲಿ, ತಿಳಿಯದೆ ಇರಲಿ. ಆದರೆ ಜೀವನವು ಜೀವಿಸಬೇಕಾದುದೆಂಬು ದನ್ನು ನಾವು ಅರಿತರೆ ಎಷ್ಟೋ ಕ್ಷೇಮ. ಜೀವನದ ಅರ್ಥವು ಜೀವಿಸುವು ದರಲ್ಲಿ ಇದೆ. ಎಂದರೆ ಸತ್ಪ್ರೇರಣೆಯನ್ನು ಹೊಂದಿ, ಸುವಿಚಾರದ ಬೆಳಕಿನಲ್ಲಿ ನಮ್ಮ ನಮ್ಮ ಕಾಯಕವನ್ನು ಸಾಗಿಸುವುದರಲ್ಲಿಯೇ ಬಾಳಿನ ತಿರುಳು ಅಡಕ ವಾಗಿದೆ. ಈ ದೃಷ್ಟಿಯಿಂದ ಜೀವನದ ಅಂಗಗಳು ಮೂರು. ಭಾವದಿಂದ ಕೂಡಿದ ಜೀವನ, ಜ್ಞಾನದಿಂದ ಕೂಡಿದ ಜೀವನ, ಕ್ರಿಯೆಯಿಂದ ಕೂಡಿದ ಜೀವನ. ಉತ್ತಮ ಜೀವನದಲ್ಲಿ ಸದ್ಭಾವನೆ, ಸುವಿಚಾರ ಅಥವಾ ಸುಜ್ಞಾನ ಹಾಗು ಸತ್ಕ್ರಿಯೆಗಳು ಸಂಗಮಗೊಂಡಿರುತ್ತವೆ. ಭಾವರಹಿತವಾದರೆ ಜೀವ ನವು ರಸರಹಿತವಾದೀತು, ರಸರಹಿತವಾದ ಜೀವನದಲ್ಲಿ ರುಚಿಯೆಂಬುದಿರ ಲಾರದು. ಜ್ಞಾನರಹಿತವಾದ ಜೀವನದಲ್ಲಿ ಬೆಳಕೆಂಬುದು ಇಲ್ಲ. ಅಂತಹ ಬಾಳು ಕುರುಡು ಬಾಳು. ಮಾನವ ಜೀವನದಲ್ಲಿ ಬೆಳಕು ಹರಿಯದಿದ್ದರೆ ಅದೆಂತಹ ಬಾಳು ? ಜ್ಞಾನವನ್ನು ಪ್ರಕಾಶವೆಂದೂ ಅಜ್ಞಾನವನ್ನು ಕತ್ತಲೆ ಯೆಂದೂ ಕರೆಯುವದರಲ್ಲಿ ಔಚಿತ್ಯವಿದೆ.

ಟೆನಿಸನ್ ಕವಿ ಹೇಳಿದಂತೆ ಜ್ಞಾನರಹಿತವಾದ ಜೀವನವು ಪಶು ಜೀವನಕ್ಕೆ ಸಮಾನವಾಗುವುದೇ ನಿಶ್ಚಯ. ಇನ್ನು ಕ್ರಿಯೆಯಿಲ್ಲದ ಜೀವನ ವಂತೂ ಜೀವನವೇ ಅಲ್ಲ. ಕ್ರಿಯೆಯಿಲ್ಲದ ಜೀವನಕ್ಕೆ ಸಾರ್ಥಕತೆ ಯೆಂಬುದಿಲ್ಲ.

ಜೀವನದಲ್ಲಿ ಕ್ರಿಯೆಯ ಮಹತ್ವವನ್ನು ಪ್ರಭುದೇವರು ತಮ್ಮ ಒಂದು ವಚನದಲ್ಲಿ ಮನಂಬುಗುವಂತೆ ನಿರೂಪಿಸಿದ್ದಾರೆ. ಹೀಗೆ:

> ಕ್ರಿಯಾ ಮಥನವಿಲ್ಲದೆ ಕಾಣಬಂದುದೇ
> ಇಕ್ಷುವಿನೊಳಗಣ ಮಧುರ ?
> ಕ್ರಿಯಾ ಮಥನವಿಲ್ಲದೆ ಕಾಣಬಂದುದೇ
> ತಿಲದೊಳಗಣ ತೈಲ ?

ಕ್ರಿಯಾ ಮಥನವಿಲ್ಲದೆ ಕಾಣಬಂದುದೇ
ಕ್ಷೀರದೊಳಗಣ ತುಪ್ಪ ?
ಕ್ರಿಯಾ ಮಥನವಿಲ್ಲದೆ ಕಾಣಬಂದುದೇ
ಕಾಷ್ಠದೊಳಗಣ ಅಗ್ನಿ ?
ಇದು ಕಾರಣ ನಮ್ಮ ಗುಹೇಶ್ವರ ಲಿಂಗದ
ತನ್ನೊಳರಿದೆನೆಂಬುವ ಮಹಂತಂಗೆ
ಸತ್ಕ್ರಿಯಾಚರಣೆಯೇ ಸಾಧನೆ ಭೋ

ಕ್ರಿಯೆಯಿಂದಲ್ಲದೆ ಜೀವನದಲ್ಲಿ ನಾವು ಏನನ್ನು ಸಾಧಿಸಲಾರೆವು. ಕ್ರಿಯಾ ಸಾಧನೆಯಿಂದಾಗಿ ದೊರೆತ ತೃಪ್ತಿಯೇ ಜೀವನದ ಸ್ವಾರಸ್ಯ. 'ಕಾಯಕವೇ ಕೈಲಾಸ' ವೆಂಬ ತತ್ವದಲ್ಲಿ ಜೀವನರಹಸ್ಯ ಅಡಕವಾಗಿದೆ.

## ಪ್ರವೃತ್ತಿ ನಿವೃತ್ತಿ

ಹೀಗಿರಲು 'ನಿವೃತ್ತಿ' ಎಂಬ ಕಲ್ಪನೆ ಹೇಗೆ ಬಂದಿತೋ ? ಕಲೆ, ಸಾಹಿತ್ಯ, ಸಂಸ್ಕೃತಿ, ಸ್ವಾತಂತ್ರ್ಯ, ಸಂಶೋಧನೆ, ಪ್ರಗತಿ ಪರಮಾರ್ಥ—ಇವೆಲ್ಲವೂ—ಒಂದೇ ಒಂದು ಮಾತಿನಲ್ಲಿ ಹೇಳುವುದಾದರೆ ಮಾನವನು ಈ ಪ್ರಪಂಚದ ವಿವಿಧ ಕ್ಷೇತ್ರಗಳಲ್ಲಿ ಸಾಧಿಸುತ್ತ ಬಂದ ಉನ್ನತಿಯೆಲ್ಲವೂ—ಕ್ರಿಯಾ ಪ್ರವೃತ್ತಿಯ ಪರಿಣಾಮ. ಗುರಿ ಸಾಧನೆಯತ್ತ ಪ್ರವೃತ್ತಿವಾಗದವರ ಜೀವನವು ಕುರುಡು ಬಾಳು, ಬರಡು ಬದುಕು.

ಕೇವಲ ಮೌನ ಧ್ಯಾನಗಳಿಂದ, ಮನ ನಿವೃತ್ತಿ ಹೊಂದದೆ, ಬರಿ ಮೈ ನಿವೃತ್ತಿ ಹೊಂದುವುದರಿಂದ ಮುಕ್ತಿಯೆಂಬುದು ದೊರೆಯುವಂತಿದ್ದರೆ ಅದು ಕೆಲಸಕ್ಕೆ ಬಾರದ ಮುಕ್ತಿ. ಮನುಷ್ಯನ ಸ್ವಭಾವದಲ್ಲಿಯೇ ಕ್ರಿಯಾ ಪ್ರವೃತಿ ಎಂಬುದಿದೆ. ಅದನ್ನು ಇಲ್ಲವಾಗಿಸಲು ಸಾಧ್ಯವಿಲ್ಲ. ಪ್ರಪಂಚದಲ್ಲಿ ಆಗಿ ಹೋದ ಮಹಾನುಭಾವರ, ಮಹಾತ್ಮರ, ಕಲಾವಿದರ, ವಿಜ್ಞಾನಿಗಳ ಕ್ರಿಯಾ ಪ್ರವೃತ್ತಿಯೂ ಉದಾತ್ತ ಹೊಂದಿದುದರಿಂದಲೇ ಅವರ ಬಾಳು ಆ ರಂಗದಲ್ಲಿ ಬೆಳಗಿತು. ಮಹಾನುಭಾವಿಗಳು ಹಾಗು ಪ್ರಭಾವಶಾಲಿಗಳೂ ತಾವು ಕ್ರಿಯಾ ಪ್ರವೃತ್ತರಾಗುವುದಲ್ಲದೆ ಜನತೆಯಲ್ಲಿ ಕ್ರಿಯಾ ಶಕ್ತಿಯನ್ನು ಪ್ರೇರಿಸುತ್ತಾರೆ.

ಆದುದರಿಂದಲೇ ಒಂದೊಂದು ಜನಾಂಗದ ಜೀವನದಲ್ಲಿ ಒಮ್ಮೊಮ್ಮೆ ಉತ್ಕ್ರಾಂತಿಯಾಗುವುದು ಸಾಧ್ಯವಾಗುತ್ತದೆ. ಮಹಾತ್ಮಾ ಗಾಂಧಿಯವರನ್ನು ಬಸವಣ್ಣನವರನ್ನೂ ಈ ಸಂದರ್ಭದಲ್ಲಿ ಉದಾಹರಿಸಬಹುದು.

ಸ್ವಾರ್ಥದಲ್ಲಿ ಅನಾಸಕ್ತಿ ಇರಲಿ; ಆದರೆ ಜೀವನದಲ್ಲಿ ಆಸಕ್ತಿ ಬೇಕು; ಒಳ್ಳೆಯದಾದುದೆಲ್ಲ ಬೇಕೆಂಬುವರಲ್ಲಿ ಯಾವ ತಪ್ಪೂ ಇಲ್ಲ. ಸಾಹಿತ್ಯ ಬೇಕು, ಸ್ವಾತಂತ್ರ್ಯಬೇಕು ಎಂದು ಕ್ರಿಯಾ ಪ್ರವೃತ್ತರಾಗುವುದು ತಪ್ಪೇನೂ ಅಲ್ಲ. ಇಷ್ಟೇಅಲ್ಲ ಅದು ನಿಶ್ಚಯವಾಗಿ ಸರಿಯಾದದು. ಕ್ರಿಯಾ ಪ್ರವೃತ್ತಿಯ ಪ್ರೇರಣೆ ಇರದೆ ಹೋಗಿದ್ದರೆ ಜಗತ್ತು ಮುನ್ನಡಿಯನ್ನೇ ಇಡುತ್ತಿರಲಿಲ್ಲ.

ಸ್ಥೂಲ ಅರ್ಥದಲ್ಲಿ ನಿವೃತ್ತಿ ಒಂದು ಸೋಗು ಮಾತ್ರ. ಆಲಸ್ಯ ಪ್ರಕೃತಿಯವರಿಗೆ ಅದೊಂದು ನೆವ. ಗೊಡ್ಡು ಪುರಾಣಿಕರಿಗೆ ಅದು ಒಂದು ಹೊಟ್ಟೆ ಹೊರೆಕೊಳ್ಳುವ ದಾರಿ. ಶಬ್ದ ಸುಖಕ್ಕೆ ಮೆಚ್ಚಿದವರಿಗೆ ಅದೊಂದು ಭ್ರಾಂತಿಮಯವಾದ ಸುಖ.

ನಮ್ಮ ಸುತ್ತು ಮತ್ತಲಿನ ಪ್ರಕೃತಿಯನ್ನು ನೋಡಿದರೆ ಅದು ರಂಗು ರಂಗಾಗಿಯೇ ಇದೆ. ಕ್ರಿಯೆಯಲ್ಲಿದ್ದಾಗ ಅದರ ಚೆಲುವು ಹೆಚ್ಚುತ್ತದೆ. ಗಾಳಿಗೆ ತೂಗುವ ಟೊಂಗೆಗಳು, ಏಳುವ ತರಂಗಗಳು. ಚೆಂದ ಕಾಣುವುದು ಏಕೆ? ಅವುಗಳ ಚಲನೆಯಿಂದಾಗಿ ನವಿಲು ಗರಿಗೆದರಿ ಕುಣಿಯುವಾಗ ನೋಡಬೇಕು. ಅಂದರೆ ಚಲನೆಯು ಉಂಟು ಮಾಡುವ ಚೆಲುವಿನ ಕಲ್ಪನೆಯಾಗುವದು. ಮನುಷ್ಯನ ಜೀವನಕ್ಕೆ ಬಂದರೆ ಮಗು ಕೈಕಾಲು ಚಾಚಿ ಆಡುವದನ್ನು ನೋಡಬೇಕು. ಎಂದರೆ ಜೀವನ ಲೀಲೆಯ ಅರ್ಥ ಹೊಳೆಯುವುದು.

ಯಾವುದು ಒಳ್ಳೆಯದಲ್ಲವೋ, ಯಾವುದು ಅಂದವಲ್ಲವೋ, ಯಾವುದು ದಿಟವಲ್ಲವೋ ಅದರಿಂದ ಅವಶ್ಯವಾಗಿ ನಿವೃತ್ತರಾಗೋಣ. ಯಾವುದು ಒಳ್ಳೆಯದೋ, ಯಾವುದು ನಿರ್ಮಲ ಸೌಂದರ್ಯದಿಂದ ಕೂಡಿದೆಯೋ, ಯಾವುದು ಮನವನ್ನು ಘನತೆಯತ್ತ ಪ್ರೇರಿಸುವದೋ ಅದರಲ್ಲಿ ಅತ್ಯವಶ್ಯವಾಗಿ ಆಸಕ್ತಿಯನ್ನು ತಳೆಯೋಣ. ತಿರುಳಿಲ್ಲದ ನಿವೃತ್ತಿ ನಿರು

ದ್ಯೋಗಕ್ಕೆ ಕಾರಣವಾಗಬಹುದು. ಅದು ಭಾರತದಲ್ಲಿ ಮಾಡಿದ ಕೇಡು ಅಷ್ಟಿಷ್ಟಲ್ಲ. ವಿಪರೀತಾರ್ಥದ ನಿವೃತ್ತಿ ಜನಾಂಗದಿಂದ ಎಷ್ಟು ಬೇಗ ನಿವೃತ್ತ ವಾದರೆ ಅಷ್ಟು ಆ ಜನಾಂಗದ ಕಲ್ಯಾಣವಾಗದಿರದು.

## ಸಮರಸ ಜೀವನ

ವ್ಯಕ್ತಿಯು ಸಮಾಜದೊಡನೆ ಬೆರೆತು ನಡೆದಕ್ಷಣ ಅವನ ಜೀವನ ಅರ್ಥ ಪೂರ್ಣವಾಗುತ್ತದೆ. ಸಮಾಜದಿಂದ ಪೋಷಣೆ ಪಡೆದು ಬೆಳೆದ ಜೀವಿಯು ಸಮಾಜಕ್ಕೆ ತನ್ನ ಕಾಣಿಕೆಯನ್ನು ನೀಡಬೇಕಾದುದು ಕರ್ತವ್ಯ. ಸಮಾಜದ ಜೀವನವು ವಿಕಸಿಸುವಂತೆ ಅವನು ಅದರೊಡನೆ ಸಹಕರಿಸಿದರೆ ಸಮಾಜ ಜೀವನವು ಸುಂದರವಾಗುವದಲ್ಲದೆ ತನ್ನ ವೈಯುಕ್ತಿಕ ಜೀವನವೂ ಸುಂದರ ವಾಗುತ್ತದೆ; ಬಂಧುರವಾಗುತ್ತದೆ. ಸಮರಸವಾಗಿ ಬಾಳಿದವರು ಪಾಪ ಪ್ರಪಂಚದಲ್ಲಿ ಸ್ವಾರಸ್ಯವನ್ನೇ ಕಾಣರು. ಏನೋ ಎಂತೋ ಜಗತ್ತಿನಲ್ಲಿ ಅವರು ಉಸುರಾಡಿಸಿ ಉಸುರುಗಳೆದು ಹೋಗುವರು ಅಷ್ಟೆ. ಸಮಾಜ ದೊಡನೆ ಕೂಡಿ ಆಡ ಬಯಸುವ ವ್ಯಕ್ತಿ ಸಹಜವಾಗಿಯೇ ಸಮಾಜ ಪ್ರಗತಿ ಗಾಗಿ ಪ್ರವೃತ್ತನಾಗುತ್ತಾನೆ; ಪ್ರೇರಣೆಯನ್ನು ತಾಳುತ್ತಾನೆ; ತನ್ನ ರೀತಿಯಲ್ಲಿ ಸಮಾಜಕ್ಕಾಗಿ ಕಾರ್ಯಮಾಡಿ ತೃಪ್ತಿಯನ್ನು ಪಡೆಯುತ್ತಾನೆ; ಇಂತಹ ತೃಪ್ತಿಗಿಂತ ಹೆಚ್ಚಿನ ತೃಪ್ತಿ ಬಹುಶಃ ಇನ್ನೊಂದಿರದು.

ಒಂದು ಕೈಯಿಂದ ಚಪ್ಪಾಳೆಯಾಗದೆಂದು ಹೇಳುವುದನ್ನು ನಾವು ಕೇಳಿ ದ್ದೇವೆ; ಹಾಗೆಯೇ ಒಂಟಿ ಜೀವನದಿಂದ ಜೀವನ ಸಂಗೀತ ಹೊಮ್ಮದು. ವೀಣೆ ಒಂದೇನೋ ನಿಜ. ಆದರೆ ಅದರಲ್ಲಿ ಅನೇಕ ತಂತಿಗಳು ಅನೇಕ ಮನೆ ಗಳು ಸೇರುತ್ತವೆ; ಎಲ್ಲ ಮನೆಗಳಲ್ಲಿ ಎಲ್ಲ ತಂತಿಗಳನ್ನು ಕ್ರಮವರಿತು ಮೀಂಟಿದಾಗಲೇ ಸುಮಧುರ ನಾದ ಹೊರಡುತ್ತದೆ.

ಹಾಗೆಯೇ ಸಮಾಜದ ವ್ಯಕ್ತಿಗಳು ಪರಸ್ಪರ ಸಹಕಾರದಿಂದ ವರ್ತಿಸಿ ದರೆ ಸಮಾಜದ ಜೀವನವು ಸಂಗೀತವಾಗಿ ಪರಿಣಮಿಸುತ್ತದೆ; ಎಷ್ಟು ಎಷ್ಟು ಹೆಚ್ಚಾಗಿ ನಾವು ಇತರರೂಡದೆ ಸೌಹಾರ್ದದಿಂದ ವರ್ತಿಸಬಲ್ಲೆವೊ ಅಷ್ಟು

ಅಷ್ಟು ಹೆಚ್ಚು, ಬಾಳಿನಲ್ಲಿ ಸೊಗಸು ತುಂಬುತ್ತದೆ. ಜೀವನವು ಒಂದು ಉತ್ಸವವಾಗಿ ಪರಿಣಮಿಸುತ್ತದೆ. ಕಷ್ಟ ನಿಷ್ಟುರಗಳೇನೇ ಬರಲಿ ಎಲ್ಲರೊಡನೆ ನಕ್ಕು ನಡೆಯುವವನೇ, ಸಕಲರೊಡನೆ ಕೂಡಿ ದುಡಿಯುವವನೇ ಬಾಳಿನಲ್ಲಿ ಗೆಲವನ್ನು ಪಡೆಯುತ್ತಾನೆ. ಬಾಳಿನ ಚೆಲುವೂ ಗೆಲವೂ ಸೌಹಾರ್ದದ ಹಾಗು ಸಹಕಾರದ ಫಲಗಳೆಂದು ಹೇಳಬಹುದು.

## ಜೀವನ ರಥೋತ್ಸವ

ಜೀವನವು ಒಂದು ರಥೋತ್ಸವವಾಗಬೇಕು; "ಜೀವನರಥೋತ್ಸವ ವಿದನಣಕಿಸದಿರು ಎಲೆ ಸನ್ಯಾಸಿ" ಎಂದು ಕುವೆಂಪು ತಕ್ಕ ಎಚ್ಚರಿಕೆಯನ್ನಿತ್ತಿದ್ದಾರೆ; ಜೀವನವನ್ನು ರಥೋತ್ಸವವೆಂದು ನಂಬಿ ನಡೆದವರ ಜೀವನ ಮಾತ್ರ ಸಾರ್ಥಕವಾಗುತ್ತದೆ. ಕಷ್ಟನಿಷ್ಠುರಗಳು ಜೀವನದಲ್ಲಿ ಬರುವದಿಲ್ಲವೆಂದಲ್ಲ; ಬರಬಹುದು; ಬರುತ್ತವೆ: ಆದರೆ ಕಷ್ಟ ನಿಷ್ಠುರಗಳನ್ನೆ ನೆನೆಯುತ್ತಾ ಕುಳಿತರೆ ಅವು ಹೆಚ್ಚಿಗೆ ನೋವನ್ನುಂಟುಮಾಡುತ್ತವೆ. ಅಲ್ಲದೆ ಜೀವನ ಸಾರ್ಥಕತೆಗೆ ಆವಶ್ಯಕವಾದ ಜೀವನೋತ್ಸಾಹವನ್ನು ಕುಗ್ಗಿಸಿ ಬಿಡುತ್ತವೆ. ಜೀವನೋತ್ಸಾಹ ಕುಗ್ಗುತ್ತ ಹೋದರೆ ಬಾಳು ಬರಿಸೊನ್ನೆ ಯಾಗುವುದೇ ನಿಶ್ಚಯ. ಕಷ್ಟನಿಷ್ಠುರಗಳನ್ನು ಕೂಡ ಸ್ವಾಗತಿಸಿ ಅವುಗಳ್ನು ಮೆಚ್ಚಿ ವಿಜಯಧ್ವಜವನ್ನು ನೆಡಬಲ್ಲವನೇ ಬಾಳಿನಲ್ಲಿ ಮುಂದುವರಿಯಬಲ್ಲವನು.

ವ್ಯಕ್ತಿಯಲ್ಲಿರುವ ಶಕ್ತಿಗಳು ಸಾಧನೆಯಿಂದ ಮಾತ್ರ ವಿಕಾಸ ಹೊಂದುತ್ತವೆ. ಕಷ್ಟನಿಷ್ಠುರಗಳಿರದಿದ್ದರೆ ವ್ಯಕ್ತಿಯ ಆತ್ಮಪ್ರೌಢಿಮೆಗೆ ಆಹ್ವಾನವೇ ಇಲ್ಲದಂತಾಗುತ್ತದೆ. ಆತ್ಮಪ್ರೌಢಿಮೆಗೆ ಆಹ್ವಾನದೊರೆಯದಿದ್ದರೆ ಆತ್ಮ ವಿಕಾಸಕ್ಕೆ ಅವಕಾಶವೇ ಇಲ್ಲ. ಆತ್ಮ ವಿಕಾಸಕ್ಕೆ ಅನುಕೂಲವಿಲ್ಲದ ಜೀವನವಿದ್ದೇನು ? ಇಲ್ಲದಿದ್ದರೇನು? ಜೀವನಕ್ಕೆ ಅರ್ಥವಿದೆ; ಅದು ಬರಿ ಸೊನ್ನೆಯಲ್ಲ; ನಾವು ತಪ್ಪಿ ಈ ಜಗದಲ್ಲಿ ಜನ್ಮವೆತ್ತಿದ್ದೇವೆಂಬ ತತ್ವ ಬರಡು. ಅದನ್ನು ಬಿಟ್ಟು ಈಸಬೇಕು ಇದ್ದು ಜೈಸಬೇಕು, ಎಂಬ ತತ್ವವನ್ನು ನಂಬಿ ನಡೆದವನ ಬಾಳು ಹೊನ್ನಾಗದೆ ಇರದು.

# ಜೀವನ ವಿಕಾಸ

**ಪೀಠಿಕೆ:**

ಬೀಜದಲ್ಲಿ ಬಳ್ಳಿ ಹುದುಗಿರುತ್ತದಷ್ಟೇ ? ಭೂಮಿಯೊಳಗೆ ನಿದ್ರಿಸಿದ ಬೀಜವನ್ನು ಬಿದ್ದ ಮಳೆ ಮುದ್ದಿಸಿ "ಮೇಲಕ್ಕೇಳು" ಎನ್ನುತ್ತದೆ. ತಾಯಿ ಮಗುವನ್ನು ತಬ್ಬಿ ಎಬ್ಬಿಸುವಂತೆ ಜಲದ ಸಂಪರ್ಕದಿಂದ ಬೀಜ ಹಿಗ್ಗುತ್ತದೆ. ಮೊಳೆತಲನುವಾದ ಸಸಿಯನ್ನು "ಬಾ ಮೇಲಕ್ಕೆ" ಎಂದು ಗಾಳಿ ಬೆಳಕುಗಳು ಕರೆಯುತ್ತವೆ; ಮೇಲಕ್ಕೆ ಸಸಿ ಕೈಚಾಚುತ್ತದೆ. ಸೂರ್ಯ ಅದನ್ನು ಸೋಂಕಿ ಹೊಗರೇರಿಸುತ್ತಾನೆ. ಗಾಳಿ ಸ್ಪರ್ಶಿಸಿ ಚೈತನ್ಯವೀಯುತ್ತದೆ. ಅಂಕುರವು ಬಳ್ಳಿಯಾಗಿ ಹರಡುತ್ತವೆ. ಕುಡಿಯಿಡುತ್ತದೆ. ಮೊಗ್ಗು ಧರಿಸುತ್ತದೆ. ಸುಪ್ರಭಾತದಲ್ಲಿ ಮೊಗ್ಗು ಅರಳಿ ತನ್ನದೆಯ ಕಂಪನ್ನು ತೋಡಿ ಜನ್ಮ ಸಾಫಲ್ಯವನ್ನು ಪಡೆಯುತ್ತದೆ. ಹೀಗೆ ನಡೆಯುತ್ತವೆ ಸಸ್ಯ ಜೀವನದ ವಿಕಾಸ ವಿಲಾಸಗಳು.

ಸಸ್ಯ ಜೀವನದ ಈ ಬಗೆಯ ವಿಕಾಸ, ಪ್ರಾಣಿ ಜೀವನದಲ್ಲಿ ಇನ್ನೂ ಹೆಚ್ಚಿನ ಹಂತದಲ್ಲಿ ನಡೆಯುತ್ತದೆ. ಪ್ರಾಣಿಗಳಲ್ಲೆಲ್ಲ ಅತ್ಯಂತ ಶ್ರೇಷ್ಠವಾದ, ಪ್ರಾಣಿಯಾದ ಜೀವನಕ್ಕೆ ಶಿಖರ ಪ್ರಾಯನಾದ ಮಾನವ ಜೀವನದ ವಿಕಾಸ ವಿಲಾಸಗಳಂತೂ ಅತ್ಯದ್ಭುತವಾಗಿ ಸಾಗುತ್ತವೆ. ಜೀವಿಯ ಚೈತನ್ಯ ಹಾಗು ಆ ಜೀವಿಯ ಸುತ್ತಲಿನ ಪರಿಸ್ಥಿತಿ ಇವೆರಡೂ ಅದರ ವಿಕಾಸವನ್ನು ನಿರ್ಧರಿಸುತ್ತವೆ. 'ಜಿರಾಫ' ಎಂಬ ಪ್ರಾಣಿಯ ಗೋಣು ಮೊದಲು ಅಷ್ಟು ಉದ್ದವಿರಲಿಲ್ಲ; ಗಿಡಗಳ ಕೆಳಗಣ ಟೊಂಗೆಗಳ ಎಲೆಗಳು ತೀರಿದಂತೆ ಮೇಲಣ ಟೊಂಗೆಗಳಿಗೆ ಆಹಾರಕ್ಕಾಗಿ ಗೋಣನ್ನು ಮೇಲೆ ಮಾಡುತ್ತ ಹೋದುದರ ಪರಿಣಾಮವಾಗಿ ಯುಗಾಂತರದಲ್ಲಿ ಅದರ ಗೋಣು ಉದ್ದವಾಯಿತಂತೆ. ಇದು ವಿಕಾಸವಾದಕ್ಕೆ ಒಂದು

ಉದಾಹರಣೆ. ಮಾನವನ ಮುತ್ತಜ್ಜ ಮಂಗನೆಂಬ ಸಂಗತಿಯನ್ನು ಈಗ ಬಹುಶಃ ಎಲ್ಲರೂ ಬಲ್ಲರು. ಯುಗಯುಗಾಂತರಗಳ ಪರಿಸ್ಥಿತಿಯ ಸಂಪರ್ಕ ದಿಂದ ಮಂಗನ ಚೈತನ್ಯ ಮಾನವ ಚೈತನ್ಯವಾಗಿ ಪರಿಣಮಿಸಿದೆಯಂತೆ. ಇದನ್ನೇ ವಿಕಾಸವಾದ ಎಂದು ಹೇಳುತ್ತಾರೆ.

ವಿಕಾಸ ಹೊಂದುವ ಗುಣ ಪ್ರಾಣಿಯ ಸಹಜ ಪ್ರಕೃತಿಯಲ್ಲಿಯೇ ಉಂಟು. ಸುತ್ತಲಿನ ಪರಿಸ್ಥಿತಿ ಪ್ರಾಣಿಯ ಮೂಲ ಪ್ರವೃತ್ತಿಯನ್ನು ಅಥವಾ ಚೈತನ್ಯ ವನ್ನು ಕೆರಳಿಸುತ್ತದೆ. ಪರಿಸ್ಥಿತಿಯ ಕ್ರಿಯೆಗೆ ಜೀವ ಪ್ರತಿಕ್ರಿಯೆ ನಡೆಸುತ್ತದೆ. ತನ್ಮೂಲಕ ಜೀವಿಗೆ ಅನುಭವ ಪ್ರಾಪ್ತವಾಗು ತ್ತದೆ. ಅನುಭವಗಳ ದಾರಿ ಹಿಡಿದು ಜೀವಿಯಲ್ಲಿ ಜೀವನ ವಿಕಾಸ ವುಂಟಾಗುತ್ತದೆ;

## ಮಾನವ ಜೀವನ ವಿಕಾಸ :

ಪಶುಪಕ್ಷಿಗಳಲ್ಲಿ ಅವುಗಳ ಸಹಜ ಪ್ರವೃತ್ತಿಯನ್ನು ಮೀರಿದ ವಿಕಾಸಕ್ಕೆ ಆಸ್ಪದವಿಲ್ಲ. ಸಹಜ ಪ್ರವೃತ್ತಿಯೆಂಬ ಮೇಟಿಯ ಸುತ್ತ ಮಾತ್ರ ಅವು ತಿರುಗಬೇಕು; ಸಹಜ ಪ್ರವೃತ್ತಿಗಳ ಬಂಧನದಿಂದ ಅವುಗಳಿಗೆ ಮುಕ್ತಿಯಿಲ್ಲ. ಆದುದರಿಂದ ಅವುಗಳ ವಿಷಯದಲ್ಲಿ ಪ್ರಗತಿಯ ಮಾತನ್ನೇ ಆಡಲಾಗುವುದಿಲ್ಲ. ಪ್ರಗತಿಗೆ; ಪಾಪ; ಅವುಗಳ ಜೀವನದಲ್ಲಿ ಅವಕಾಶವೇ ಇಲ್ಲ. ಮಾನವ ಪ್ರಾಣಿ ಶೈಶವದಲ್ಲಿ ಪಶುಪಕ್ಷಿಗಳಂತೆ ಹೆಚ್ಚಾಗಿ ಸಹಜಪ್ರವೃತ್ತಿಗಳಿಗನುಸಾರವಾಗಿ ವರ್ತಿಸುವನೇನೋ ನಿಜ. ಆದರೆ ಅವನು ಶೈಶವವನ್ನು ದಾಟಿದ ಬಳಿಕ ಬರಬರುತ್ತ ಸಹಜಪ್ರವೃತ್ತಿಗಳ ಆವರಣವನ್ನು ಸಂಪೂರ್ಣವಾಗಿ ಮೀರಿದ ಜ್ಞಾನೋದಯವೂ ವಿವೇಕೋದಯವೂ ಅವನಲ್ಲಿ ಉಂಟಾಗಿ ಅವನ ಅಂತ ರಂಗವು ವಿಕಸಿಸುತ್ತದೆ. ಮಾನವನ ಸಹಜ ಪ್ರವೃತ್ತಿಗಳು ಬರಬರುತ್ತ ವಿಕಾಸಹೊಂದಿ ಅನುರಾಗಗಳಾಗಿ ಪರಿಣಮಿಸುತ್ತವೆ; ವ್ಯಕ್ತಿಯ ಶೀಲ ಈ ಅನುರಾಗಗಳನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ; ಅವನ ಅನುರಾಗಗಳು ಒಳ್ಳೆಯವಾದರೆ ಅವನ ಶೀಲ ಒಳ್ಳೆಯದಾಗುತ್ತದೆ. ಅವನ ಅನುರಾಗಗಳು ಅನಿಷ್ಟವಾದ ರೀತಿಯಲ್ಲಿ ರೂಪುಗೊಂಡರೆ ಅವನ ಶೀಲ ಕೆಟ್ಟುಹೋಗುತ್ತದೆ.

ಮಾನವನ ಬೆಳವಣಿಗೆಯ ಸ್ಥಲದಲ್ಲಿ ಈ ಅನುರಾಗಗಳು ರೂಪ ಗೊಳ್ಳುತ್ತವೆ; ಆದುದರಿಂದ ವ್ಯಕ್ತಿಯ ಬೆಳವಣಿಗೆಯ ಅವಸ್ಥೆಯು ಬಹಳ ಮಹತ್ವದ್ದು. ಆಗ ಒಳ್ಳೆಯ ಅನುರಾಗಗಳು ಅವನಲ್ಲಿ ಮೂಡಿ ಬೆಳೆಯು ವಂತೆ ನೋಡಿಕೊಳ್ಳುವುದು ಗುರುಹಿರಿಯರ ಹೊಣೆ: ಒಳ್ಳೆಯ ಅನುರಾಗಗಳು ರೂಪುಗೊಳ್ಳಬೇಕಾದರೆ ಬೆಳೆಯುವ ಬಾಲಕನಿಗಾಗಿ ಒಳ್ಳೆಯ ವಾತಾವರಣ ವನ್ನು ಕಲ್ಪಿಸಿಕೊಡುವುದೇ ಹಿರಿಯರ ಹೊಣೆ. ಬರಿ ಮಾತಿನಿಂದ ಒಳ್ಳೆಯ ಶೀಲವನ್ನು ರೂಪುಗೊಳ್ಳಿಸುವುದು ಸಾಧ್ಯವಿಲ್ಲ, ನೆರೆ ಹೊರೆಯಿಂದ, ಸುತ್ತು ಮುತ್ತಲಿನ ಜೀವನದಿಂದ, ತಕ್ಕ ಉತ್ತಮ ವಾತಾವರಣದ ಯೋಜನೆಯಿಂದ ಸದ್ಭಾವಗಳನ್ನು ಕೆರಳಿಸಿ ಅವುಗಳನ್ನು ತೃಪ್ತಿಗೊಳಿಸುವ ವ್ಯವಸ್ಥೆಯಿಂದ ಉತ್ತಮವಾದ ಅನುರಾಗಗಳನ್ನು ಅಭಿರುಚಿಗಳನ್ನು ಉಂಟುಮಾಡಬಹುದು. ಇಲ್ಲಿ ನುಡಿಗಿಂತ ನಡೆ ಮುಖ್ಯ. ಮಾತಿಗಿಂತ ಪರಿಸರ ಮುಖ್ಯ; ಒಂದು ಉದಾಹರಣೆಯಿಂದ ಈ ಮಾತು ಸ್ಪಷ್ಟವಾಗಿ ತಿಳಿಯಬಹುದು. ಬೆಳೆಯುವ ಬಾಲಕನ ಆವರಣದಲ್ಲಿ ಪುಸ್ತಕಗಳೂ ಪುಸ್ತಕಗಳನ್ನು ಓದಿ ಆನಂದ ಪಡುವವರೂ ಇದ್ದರೆ ಆ ಬಾಲಕನು ಸಹಜವಾಗಿ ವಾಚನಾಭಿರುಚಿಯನ್ನು ಉಂಟುಮಾಡಿಕೊಳ್ಳಲು ಸಾಕು. ಹೊರಗಿನ ಆಜ್ಞೆಗಿಂತ ಅಂತರಂಗಕ್ಕೆ ದೊರೆಯುವ ಪ್ರೇರಣೆ ಬಹಳ ಮಹತ್ವದ್ದು.

ಅದೇ ಹುಟ್ಟಿದಾಗ ಮಗು ಪರಂಪರೆಯ ಒಂದು ಮುದ್ದೆ. ಪ್ರಕೃತಿಯ ಗೊಂಬೆ; ಸಹಜಪ್ರವೃತ್ತಿಗಳ ಒಂದು ಘಟ್ಟಿ. ದಿನಗಳುರುಳಿದಂತೆ ಅದರಲ್ಲಿ ಗುಪ್ತವಾಗಿದ್ದ ಪ್ರವೃತ್ತಿಗಳೂ ಶಕ್ತಿಗಳೂ ಒಂದರಹಿಂದೊಂದು ಜಾಗ್ರತ ವಾಗುತ್ತವೆ; ಆ ಸುಪ್ತ ಶಕ್ತಿಗಳೂ ಗುಪ್ತ ಪ್ರವೃತ್ತಿಗಳೂ ಉತ್ತಮ ರೀತಿ ಯಲ್ಲಿ ಅರಳಲು ಅವರಿಗೆ ಉತ್ತೇಜನ ಪರವೂ ಹಿತವೂ ಆದ ಪ್ರಭಾವಗಳು ಅನುಕೂಲ್ಯವಾಗುತ್ತವೆ. ಅ ಪ್ರಭಾವಗಳಿಗೆ ಒಟ್ಟಾಗಿ ಸಂಸ್ಕಾರವೆಂದು ನಾವು ಕರೆಯುತ್ತೇವೆ. ತಕ್ಕ ಸಂಸ್ಕಾರವನ್ನು ಶರೀರಕ್ಕೆ, ಬುದ್ಧಿಗೆ, ಹೃದಯಕ್ಕೆ ಕೊಡುವ ವ್ಯವಸ್ಥೆಯೇ ಶಿಕ್ಷಣ.

ಅನುರಾಗಗಳಲ್ಲಿ ಕೇಂದ್ರದಂತಿರುವ ಆತ್ಮಾನುರಾಗದ ಬೆಳವಣಿಗೆಯು ವ್ಯಕ್ತಿಯ ವಿಕಾಸದಲ್ಲಿ ಅತ್ಯಂತ ಮುಖ್ಯವಾದುದು. ಉಳಿದ ಅನುರಾಗ

ಗಳನ್ನೆಲ್ಲ ಒಂದುಗೂಡಿಸುವ ಶಕ್ತಿ ಸರಿಯಾಗಿ ಬೆಳೆದ ಆತ್ಮಾನುರಾಗಕ್ಕೆ ಮಾತ್ರ ಪ್ರಾಪ್ತವಾಗುವುದು. ಅದು ಶೀಲದ ಬೆನ್ನೆಲುಬು ಇದ್ದ ಹಾಗೆ. ಆತ್ಮವಿಶ್ವಾಸ, ಆತ್ಮಸಂಯಮನ; ಆತ್ಮೋನ್ನತಿ ಇವೇ ಮೊದಲಾದ ಗಟ್ಟಿ ಗುಣಗಳು ಆತ್ಮಾನುರಾಗದ ಬೆಳವಣಿಗೆಯಿಂದ ತಾನಾಗಿಯೇ ರೂಪುಗೊಳ್ಳುತ್ತವೆ. ಆದುದರಿಂದ ಬೆಳೆಯುವ ಬಾಲಕರ ಆತ್ಮಪ್ರೀತಿಗೆ ಯಾವ ಆಘಾತವೂ ಆಗದಂತೆ ಹಾಗು ಅದಕ್ಕೆ ತಕ್ಕ ಉತ್ತೇಜನ ದೊರೆಯುವಂತೆ ನೋಡಿಕೊಳ್ಳುವುದು ಅವರ ಬೆಳವಣಿಗೆಗೆ ಹೊಣೆಗಾರರಾದವರ ಆದ್ಯ ಕರ್ತವ್ಯ. ಅಂದರೇನೇ ವ್ಯಕ್ತಿಯಲ್ಲಿ ಕೆಚ್ಚು ನೆಚ್ಚುಗಳು ಮೂಡುತ್ತವೆ; ಅವನ ಜೀವನೋತ್ಸಾಹವು ಜೀವನ ಸಾರ್ಥಕತೆಗೆ ಮಾರ್ಗವನ್ನು ಮಾಡುತ್ತದೆ.

ಒಳ್ಳೆಯ ಸಂಸ್ಕಾರವು ಒಳ್ಳೆಯ ವಾತಾವರಣದಿಂದ ಅಥವಾ ಒಳ್ಳೆಯ ಪರಿಸ್ಥಿತಿಯಿಂದ ಪ್ರಾಪ್ತವಾಗುವುದೆಂದು ಹೇಳಲಾಯಿತಷ್ಟೇ? ಪರಿಸ್ಥಿತಿಯನ್ನು ಎರಡು ವರ್ಗಗಳಾಗಿ ವಿಂಗಡಿಸಬಹುದು. ಒಂದು ನೈಸರ್ಗಿಕ ವಾತಾವರಣ; ಇನ್ನೊಂದು ಸಾಮಾಜಿಕ ವಾತಾವರಣ. ಈ ಎರಡೂ ಬಗೆಯ ಸನ್ನಿವೇಶಗಳು ಚೆನ್ನಾಗಿದ್ದರೆ ಬೆಳೆಯುವ ಜೀವಕ್ಕೆ ಒಳ್ಳೆಯ ಸಂಸ್ಕಾರದೊರೆತು ಅದರ ಜೀವನವು ಕುಸುಮದಂತೆ ವಿಕಸಿಸುವುದು. ಪ್ರಕೃತಿಯ ಸಂಪರ್ಕವು ಕವಿಗಳನ್ನು ಕಲಾವಿದರನ್ನೂ ನಿರ್ಮಿಸಲು ನೆರವಾಗುತ್ತ ಬಂದಿದೆ. ಇತ್ತೀಚಿನ ಉದಾಹರಣೆಗಳನ್ನೇ ಕೊಡಬೇಕೆಂದರೆ ಕವಿ ರವೀಂದ್ರರ ಹಾಗೂ ಕವಿ ಕುವೆಂಪು ಅವರ ಹೆಸರುಗಳು ಸಾಕು.

ಇನ್ನು ಸಾಮಾಜಿಕ ಪರಿಸ್ಥಿತಿಯಲ್ಲಿ ಸುತ್ತಲಿನ ಜನರ, ನಡೆ ನುಡಿಗಳು, ರೀತಿನೀತಿಗಳು, ಆಶೆ ಆಕಾಂಕ್ಷೆಗಳು, ಅನುರಾಗ ಅಭಿರುಚಿಗಳು- ಇವೆಲ್ಲ ಘಟಕಗಳಾಗಿ ಸೇರುತ್ತವೆ: ಬೆಳೆಯುವ ಜೀವಕ್ಕೆ ಬೇಕಾಗುವ ಸಾಹಿತ್ಯದಲ್ಲಿ ಅನೇಕ ಅಂಶಗಳು ಸೇರುತ್ತವೆ. ಪ್ರಪಂಚದ ಜ್ಞಾನ ಸಂಗ್ರಹವು ಈ ಸಾಹಿತ್ಯದ ಮುಖ್ಯ ಅಂಶಗಳಲ್ಲಿ ಒಂದು. ರೂಢಿಗಳೂ ಸಂಪ್ರದಾಯಗಳೂ ಈ ಸಾಹಿತ್ಯದಲ್ಲಿ ಸಮಾವೇಶವಾಗುತ್ತವೆ. ಸಾಹಿತ್ಯ (ವಾಙ್ಮಯ) ವಂತೂ ಸರಿಯೇ ಸರಿ. ಕಲೆ, ಸಂಗೀತ ಇವೂ ಸಮಾವೇಶವಾಗುತ್ತವೆ. ಇಂದಿನ ಪ್ರಪಂಚದಲ್ಲಿ ಪತ್ರಿಕೆಗಳೂ, ಆಕಾಶವಾಣಿಯೂ ಈ ಜೀವನ ಸಾಹಿತ್ಯದ

ಮಹತ್ವದ ಶಾಖೆಗಳಾಗಿ ಪರಿಣಮಿಸುತ್ತಿವೆ. ಶೈಕ್ಷಣಿಕ ಚಿತ್ರಪಟಗಳು ಸಿದ್ಧವಾದರಂತೂ ಬಾಲಕರ ಬೆಳವಣಿಗೆಗೆ ಇನ್ನು ಹೆಚ್ಚಿನ ಅನುಕೂಲವಾಗುವುದರಲ್ಲಿ ಸಂದೇಹವಿಲ್ಲ.

ಜೀವನ ವಿಕಾಸದ ಬಗೆಗೆ ಅರಿತುಕೊಳ್ಳಬಹುದಾದ ಇನ್ನೊಂದು ಅತಿ ಮಹತ್ವದ ಸಂಗತಿಯೆಂದರೆ ಆ ವಿಕಾಸವು ಬೆಳೆಯುವ ಜೀವಿಯ ಗತಿಮತಿಗಳಿಗನುಸಾರವಾಗಿಯೇ ಸಾಗಬೇಕೆಂಬುದು. ಹಾಗಾಗದಿದ್ದರೆ ಜೀವಿಗೆ ಏನೋ ಒಂದು ಅತೃಪ್ತಿಯುಂಟಾಗಿ ಜೀವನೋತ್ಸಾಹದ ಕಾರಂಜಿ ಬತ್ತಿ ಹೋಗುವ ಸಂಭವವಿದೆ; ಬೆಳೆಯುವ ಜೀವಿಯ ಜೀವನದಲ್ಲಿ ನಿರಾಶೆ ನಿರುತ್ಸಾಹಗಳು ತಲೆದೋರದಂತೆ ನೋಡಿಕೊಳ್ಳುವುದು ಅತ್ಯಗತ್ಯ. ಹಾಗೆ ನೋಡಿಕೊಂಡರೇನೇ ನಮ್ಮ ಆಗು ಹೋಗುಗಳು ನಮ್ಮ ಕೈಯಲ್ಲಿವೆ ಎಂಬ ಆತ್ಮವಿಶ್ವಾಸವು ಅವನಲ್ಲಿ ದೃಢವಾಗಿ ಒಡಮೂಡುವುದು. ಅಂಥವನಿಗೆ ಮಾತ್ರ ಜೀವನಸಿದ್ಧಿ ಸಾಧ್ಯ. ಅಂಥವನು ಮಾತ್ರ ತನ್ನದೇ ಆದ ರೀತಿಯಲ್ಲಿ ಸಮಾಜಕ್ಕೆ ಕಾಣಿಕೆಯನ್ನು ನೀಡಬಲ್ಲನು. ಇಂಥ ವ್ಯಕ್ತಿಗಳು ಯಾವ ಸಮಾಜದಲ್ಲಿ ಹೆಚ್ಚು ಹೆಚ್ಚಾಗಿ ಸಿದ್ಧರಾಗುವರೋ ಅಷ್ಟು ಅಷ್ಟು ಆ ಸಮಾಜವು ಪ್ರಗತಿಯ ಸೋಪಾನವನ್ನೇರುವುದು.

## ವಿಕಾಸದ ಸ್ಥಲಗಳು:

ವ್ಯಕಿಯ ಬೆಳವಣಿಗೆ ಸಾಮಾನ್ಯವಾಗಿ ನಾಲ್ಕು ಸ್ಥಲಗಳಲ್ಲಿ ಅಥವಾ ಹಂತಗಳಲ್ಲಿ ನಡೆಯುತ್ತದೆಂದು ಮನಶ್ಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಶೈಶವ, ಬಾಲ್ಯ, ಪೌಗಂಡ ಮತ್ತು ಯೌವನ ಇವು ಆ ನಾಲ್ಕು ಸ್ಥಲಗಳು. ಪ್ರತಿಯೊಂದು ಸ್ಥಲದಲ್ಲಿ ಸಾಗುವ ವಿಕಾಸವು ಪ್ರಾಮುಖ್ಯವಾಗಿ ಎರಡು ಅಂಶಗಳನ್ನು ಅವಲಂಬಿಸಿರುತ್ತದೆ. ಒಂದು ಬೆಳೆಯುವ ವ್ಯಕ್ತಿಯ ಮೂಲ ಪ್ರಕೃತಿ. ಇನ್ನೊಂದು ಆ ಮೂಲ ಪ್ರಕೃತಿಯ ಮೇಲೆ ಆಡುವ ಪ್ರಭಾವಗಳು. ಅವುಗಳನ್ನು ಒಟ್ಟಾಗಿ ಪರಿಸ್ಥಿತಿ ಎಂದು ಕರೆಯಬಹುದೆಂದು ಈ ಮೊದಲೇ ಹೇಳಿದೆ. ಇಲ್ಲಿ ಮೂಲ ಪ್ರಕೃತಿಯನ್ನು ಬೀಜಕ್ಕೆ ಹೋಲಿಸಬಹುದು. ಉದಾಹರಣೆಗಾಗಿ ಮಲ್ಲಿಗೆಯ ಬೀಜದಲ್ಲಿ ಅಂಕುರ, ಆ ಅಂಕುರದಿಂದ

ವಿಕಾಸವಾಗುವ ಬಳ್ಳಿ, ಆ ಬಳ್ಳಿಗೆ ಆಗುವ ಎಲೆ ಹೂವು, ಆ ಹೂವಿನಿಂದ ಹರಡುವ ಸೌರಭ,—ಇವೆಲ್ಲ ಹುದುಗಿವೆ. ಅಂಕುರ ಬಳ್ಳಿಯಾಗಿ ಹೂತಳೆದು ಪರಿಮಳವನ್ನು ಹರಡಬೇಕಾದರೆ ಅದರ ಬೆಳವಣಿಗೆಗೆ ತಕ್ಕ ಪರಿಸ್ಥಿತಿ ಒದಗ ಬೇಕಷ್ಟೇ? ತಕ್ಕ ಪರಿಸ್ಥಿತಿ ಒದಗಿದಾಗ್ಗೆ ಮಲ್ಲಿಗೆಯ ಬೀಜದಿಂದ ಮಲ್ಲಿಗೆಯ ಬಳ್ಳಿಯೇ ಹೊರಡುವುದಲ್ಲದೆ ಕುಂಬಳ ಬಳ್ಳಿ ಹೊರಡಲಾರದು. ಆದುದ ರಿಂದ ಮೂಲ ಪ್ರಕೃತಿಯ ಅಂಶವೂ ಮುಖ್ಯ. ಇನ್ನು ಆ ಬೀಜಕ್ಕೆ ಅನು ಕೂಲ ಪರಿಸ್ಥಿತಿ ಒದಗದಿದ್ದರೆ ಅದು ಬಳ್ಳಿಯಾಗದೇ ಅಳಿದು ಹೋಗಬಹುದು. ಆದುದರಿಂದ ಅನುಕೂಲ ಪರಿಸ್ಥಿತಿಯ ಆವಶ್ಯಕತೆ ಅಷ್ಟಿಷ್ಟಲ್ಲ.

## ಶೈಶವ:

ಹುಟ್ಟಿದಂದಿನಿಂದ ೬ನೆಯ ವಯಸ್ಸಿನ ವರೆಗಿನ ಅವಸ್ಥೆಯಿದು. ಶಿಶು ಅವಸ್ಥೆಯಲ್ಲಿ ಸಹಜಪ್ರವೃತ್ತಿಗಳು ಮೆಲ್ಲನೆ ಅರಳುತ್ತವೆ. ಜ್ಞಾನೇಂದ್ರಿಯ ಗಳು- ಎಂದರೆ ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚ-ಇವು ತಮ್ಮ ಕ್ರಿಯೆ ಗಳನ್ನು ಸರಿಯಾಗಿ ಮಾಡಲು ಸಿದ್ಧತೆಯನ್ನು ಪಡೆಯುತ್ತವೆ. ಶೈಶವದ ಬೆಳ ವಣಿಗೆ ಸರಿಯಾಗಿ ಆಗಬೇಕಾದರೆ ಈ ಜ್ಞಾನೇಂದ್ರಿಯಗಳು ತರಬೇತಿ ಹೊಂದುವದಕ್ಕೆ ತಕ್ಕ ಯೋಜನೆ ಅವಶ್ಯ. ಅದರಂತೆ ಅರಳುತ್ತಿರುವ ಕೌ ತುಕ, ಆತ್ಮಪ್ರೌಢಿಮೆ, ರಚನಾ ಪ್ರವೃತ್ತಿಗಳ ಉತ್ಸಾಹವು ಬೆಳೆಯುವ ವ್ಯಕ್ತಿಗೆ ತೃಪ್ತಿಯಾಗುವಂತೆ ಹಾಗು ಹಿತವಾದ ಪರಿಣಾಮನ್ನುಂಟು ಮಾಡು ವಂತೆ ಹರಿಯಲು ದಾರಿಯನ್ನು ಮಾಡಿಕೊಡುವುದು ಆವಶ್ಯಕ. 'ಮಾರ್ಗ ದರ್ಶನ' ಎಂಬ ಪ್ರಯೋಗ ಈ ಕಾರಣದಿಂದಲೇ ಬಳಕೆಗೆ ಬಂದಿದೆ. ಆ ಮಾರ್ಗ ದರ್ಶನ ಫಲವಾಗಿ ಸಹಜಪ್ರವೃತ್ತಿಗಳು ಪರಿಸ್ಥಿತಿಗೆ ಯೋಗ್ಯವಾದ ಪ್ರತಿಕ್ರಿಯೆ ಯನ್ನು ಮಾಡತೊಡಗುವುವು. ಯೋಗ್ಯ ಪರಿಸ್ಥಿತಿಗೆ ಯೋಗ್ಯ ಪ್ರತಿಕ್ರಿಯೆ ಯನ್ನು ಮಾಡುವುದೇ ಜೀವನ ರಹಸ್ಯ... ಈ ಅವಸ್ಥೆಯಲ್ಲಿ ಮನೆಯಲ್ಲಿ ಮಾರ್ಗದರ್ಶನ ಮಾಡುವ ಪಾಲಕರ ಹೊಣೆ ಅಷ್ಟಿಷ್ಟಲ್ಲ. ಕಿಂಡರ್ ಗಾರ್ಟನ್, ಮಾಂಟಿಸರಿ ಮೊದಲಾದ ಶಿಕ್ಷಣ ಪದ್ಧತಿಗಳು ಈ ಅವಸ್ಥೆ ಯಲ್ಲಿರುವ ಬಾಲಕರಿಗೆ ಮಾರ್ಗದರ್ಶನ ಮಾಡುವುದಕ್ಕಾಗಿಯೇ ರೂಪು ಗೊಂಡಿವೆ.

**ಬಾಲ್ಯ:**

೬ರಿಂದ ೧೨ನೆಯ ವಯಸ್ಸಿನ ವರೆಗಿನ ಅವಸ್ಥೆಯು ಬಾಲ್ಯ: ಉಳಿದ ಪ್ರವೃತ್ತಿಗಳಿಗೆ ಈ ಅವಸ್ಥೆಯಲ್ಲಿ ಸಂಘಪ್ರವೃತ್ತಿಯು ಜೊತೆಗೂಡುತ್ತದೆ. ಒಂದು ಸಣ್ಣ ಸಮಾಜದ ರೀತಿ ನೀತಿಗಳಿಗೆ ಹೊಂದಿಕೊಂಡು ಹೋಗುವ ಪ್ರವೃತ್ತಿ ಅಗ ಅದೇ ಉದಯವಾಗುತ್ತದೆ. ಸಾಮೂಹಿಕ ಆಟ, ಸಾಮೂಹಿಕ ಸಾಹಸಗಳು ತೋರ್ಪಡಿಸಿಕೊಳ್ಳುವ ಅವಸ್ಥೆ ಅದು. ಸಂಘ ಪ್ರವೃತ್ತಿಯ ಉತ್ಸಾಹಕ್ಕೆ ಈ ದಶೆಯಲ್ಲಿ ತಕ್ಕ ಆಸ್ಪದ ದೊರೆತರೆ ಸೌಹಾರ್ದ ಸಹಕಾರ ಮೊದಲಾದ ಉತ್ತಮ ಸಾಮಾಜಿಕ ಗುಣಗಳು ರೂಪಗೊಳ್ಳುವವು. ಇವು ಸಾಮಾಜಿಕ ಜೀವನಕ್ಕೆ ಅತ್ಯಂತ ಉಪಯುಕ್ತವಾದ ಗುಣಗಳು. ಸಮಾಜಕ್ಕೆ ಹೊಂದಿಕೊಂಡು ನಡೆದು ಸಾಮಾಜಿಕ ಜೀವನಕ್ಕೆ ಕಾಣಿಕೆಯನ್ನು ನೀಡದ ವ್ಯಕ್ತಿಯ ಬಾಳು ಬರಡು ಬಾಳು. ಸಾಹಸಕ್ಕೆ ವ್ಯಕ್ತಿ ಸಿದ್ಧವಾಗುವ ವಿಕಾಸದ ಸ್ಥಲವು ಇದೇ. ಸಾಹಸವಿಲ್ಲದ ಜೀವನ ಏತರ ಜೀವನ? ಅದು ನೀರಸ ಜೀವನ. ಸಾಹಸದಿಂದಲ್ಲದೆ ಪ್ರಗತಿಯಿಲ್ಲ. ಪ್ರಪಂಚದ ವಿವಿಧ ರಂಗಗಳಲ್ಲಿ ಸಾಹಸಿಗಳಾದವರು ಇಲ್ಲಿಯ ವರೆಗೆ ಸಾಹಸಮಾಡುತ್ತ ಬಂದಿರುವುದರಿಂದಲೇ ಮಾನವ ಜೀವನವು ಅರ್ಥಪೂರ್ಣವಾಗುತ್ತ ಬಂದಿದೆ; ಸ್ವಾರಸ್ಯ ಪೂರ್ಣವಾಗುತ್ತ ಬಂದಿದೆ. ಜಗತ್ತು ಮುಂದುವರಿಯುವುದು ಸಾಹಸಿಗಳಿಂದ; ಸಾಮೂಹಿಕ ಸಾಹಸ ಗುಣ ಸರಿಯಾಗಿ ಬೆಳೆಯುವದಕ್ಕೆ ಬಾಲ್ಯದಲ್ಲಿ ತಕ್ಕ ಉತ್ತೇಜನ ದೊರೆಯುವುದು ತುಂಬಾ ಅವಶ್ಯಕ, Success Comes to those who dare and act; it seldom goes to the timid: ಎಂದು ಭಾರತದ ನಾಯಕರಾದ ಪಂಡಿತ ಜವಾಹರರು ಹೇಳಿದ್ದಾರಷ್ಟೇ. ಆ ರೀತಿಯಲ್ಲಿ ಬಾಲಕರು ಸಾಹಸಿಗಳಾಗಿ ಬೆಳೆದು ಅವರು ಜೀವನದಲ್ಲಿ ಜಯಶೀಲರಾಗುವಂತೆ, ತನ್ಮೂಲಕ ಅವರು ತಮ್ಮ ರಾಷ್ಟ್ರದ ಸರ್ವತೋಮುಖ ಪ್ರಗತಿಗೆ ಕಾರಣರಾಗುವಂತೆ ಅವರಿಗೆ ಈ ಅವಸ್ಥೆಯಲ್ಲಿ ಉತ್ತೇಜನ ಪರವಾದ ಮಾರ್ಗದರ್ಶನ ದೊರೆಯಬೇಕು.

**ತಾರುಣ್ಯ ಪೂರ್ವಸ್ಥಲ:**

ಬಾಲಕನು ತನ್ನ ಹನ್ನೆರಡನೆಯ ವಯಸ್ಸಿನ ಸುಮಾರಿನಲ್ಲಿ ಬಾಲ್ಯವನ್ನು ದಾಟಿ ಮುಂದಿನ ಒಂದು ಅವಸ್ಥೆಯಲ್ಲಿ ಕಾಲಿಡುತ್ತಾನೆ. ಅದನ್ನು ತಾರುಣ್ಯ

ಪೂರ್ವಸಲವೆಂದು ಕರೆಯಬಹುದು. ಈ ಅವಸ್ಥೆಯಲ್ಲಿ ಬೆಳವಣಿಗೆಯನ್ನು ಸುಸೂತ್ರವಾಗಿ ಸಾಧಿಸುವುದು ಸುಲಭವಲ್ಲ. ನಡೆನುಡಿಗಳಲ್ಲಿ ಬಹಳವಾಗಿ ತೊಡಕನ್ನು ಉಂಟುಮಾಡುವ ಪ್ರವೃತ್ತಿಯೊಂದು ಈ ಸ್ಥಲದಲ್ಲಿ ಪ್ರಬಲ ವಾಗುತ್ತದೆ. ಅದು ಅನಂಗ ಪ್ರವೃತ್ತಿ. ಬೆಳೆಯುತ್ತಿರುವ ವ್ಯಕ್ತಿಯ ಚಿತ್ತ-ರಂಗದಲ್ಲಿ ಅದು ಒಂದು ಕೋಲಾಹಲವನ್ನೇ ಎಬ್ಬಿಸುತ್ತದೆ. ಅದರ ಆ ಘಾತಕ್ಕೆ ತರುಣರು ಕಕ್ಕಾ ಬಿಕ್ಕಿಯಾಗಿ ಹೋಗುತ್ತಾರೆ. ಆದುದರಿಂದ ೧೨ನೆಯ ವಯಸ್ಸಿನಿಂದ ಸುಮಾರು ೧೮ನೆಯ ವಯಸ್ಸಿನ ವರೆಗೆ ಉಳಿಯುವ ಈ ಪೌಗಂಡ ಅವಸ್ಥೆಯಲ್ಲಿ ಮಾರ್ಗದರ್ಶನ ಅವಶ್ಯಕತೆ ಇಷ್ಟೇ ಎಂದು ಹೇಳಲಿಕ್ಕಾಗದು. ಒಂದು ಕಡೆ ಸ್ವಾಭಿಮಾನ ಜಗ್ರುತ್ತಿದ್ದರೆ ಇನ್ನೊಂದು ಕಡೆ ಅನಂಗ ಪ್ರವೃತಿಯು ಎಳೆಯುತ್ತದೆ. ಹೀಗಾಗಿ ಅವೆರಡರ ನಡುವೆ ಒಂದು ಹೋರಾಟ ನಡೆದು ತರುಣನು ಉತ್ಸಾಹಗುಂದುವ ಸಂಭವ ಬಹಳ. ಆದುದರಿಂದ ಕಾಮಪ್ರವೃತ್ತಿಯನ್ನು ಉದಾತ್ತ ಗೊಳಿಸುವಂಥ ಸದುತ್ಸಾಹದ ಕಾರ್ಯಗಳಲ್ಲಿ ತರುಣನನ್ನು ತೊಡಗಿಸುವುದು ಏಕ ಮಾತ್ರ ಉಪಾಯವಾಗಿ ಪರಿಣಮಿಸುತ್ತದೆ. ಕಾಮ ಪ್ರವೃತ್ತಿಯ ಉತ್ಸಾಹ ಸರಿಯಾದ ಮಾರ್ಗದಲ್ಲಿ ಹರಿದರೆ ತರುಣರಲ್ಲಿ ಒಳ್ಳೆಯ ಅಭಿರುಚಿಗಳು ನೆಲೆಗೊಳ್ಳುವದಲ್ಲದೆ ಅವರ ಗತಿ ಮತಿಗಳು ಸಂಪೂರ್ಣವಾಗಿ ವಿಕಸಿಸುವವು. ತರುಣರು ಈ ಅವಸ್ಥೆಯಲ್ಲಿ ಶಾರೀರಿಕ, ಭೌತಿಕ, ಸಾಮಾಜಿಕ, ಸಾಹಿತ್ಯಕ, ಸಾಂಸ್ಕೃತಿಕ ಹಾಗು ವಿಜ್ಞಾನ ಪ್ರಯೋಗಕ್ಕೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ತೊಡಗುವಂತೆ ನೋಡಿಕೊಳ್ಳುವುದು ಅವರ ಪಾಲಕರ ಕರ್ತವ್ಯ. ವಿಭೂತಿಪೂಜೆಯು ಈ ಸ್ಥಲದ ಮುಖ್ಯ ಲಕ್ಷಣಗಳಲ್ಲಿ ಒಂದು. ತರುಣರು ಅದೆಂತೋ ತಮ್ಮ ಆದರ್ಶ ವ್ಯಕ್ತಿಗಳನ್ನು ಆಯ್ದುಕೊಂಡು ಅದರ ಬಗೆಗೆ ಕೌತುಕವನ್ನು ತಾಳುತ್ತಾರೆ. ಅವರ ಗುಣಗಳನ್ನು ಸರಿಪಡಿಸಲು ಹವ್ಯಾಸ ಪಡುತ್ತಾರೆ. ಆದುದರಿಂದ ಅವರ ಮುಂದೆ ಒಳ್ಳೆಯ ವ್ಯಕ್ತಿಗಳ ಆದರ್ಶವನ್ನು ಎತ್ತಿ ಹಿಡಿಯುವುದು ಕ್ಷೇಮ. ಅವರ ಮಾರ್ಗವನ್ನು ಅನುಸರಿಸುವಲ್ಲಿ ಅವರ ಉತ್ಸಾಹದ ಸದ್ವಿನಿಯವಾಗಿ ಅವರಲ್ಲಿ ಯೋಗ್ಯವಾದ ಅಭಿರುಚಿಗಳೂ, ಕ್ರಿಯಾಶೀಲತೆಯೂ, ಕಾರ್ಯಕ್ಷಮತೆಯೂ ಉಂಟಾಗುವವು. ಸಜ್ಜೀವನಕ್ಕೆ ಬೇಕಾಗುವ ಸಿದ್ಧತೆ ಇದೇ.

ಚಿತ್ತದಲ್ಲಿ ಸಾಕಷ್ಟು ಸಂದೇಹಗಳು ಏಳುವ ಅವಸ್ಥೆಯಿದು. ಆ ಸಂದೇಹಗಳನ್ನು ಹಿರಿಯರಾದವರು ಅತ್ಯಂತ ಸಹಾನುಭೂತಿಪರರಾಗಿ ನಿವಾರಿಸಿದರೆ ಮಾತ್ರ ನಾಚಿಕೆಯ ಭಾರದಿಂದ ಕುಗ್ಗಿಹೋಗುವ ಉತ್ಸಾಹವು ಉತ್ತಮ ಅಭಿರುಚಿಗಳ ಹಾಗು ಆದರ್ಶಗಳ ಸಾಧನೆಯಲ್ಲಿ ವಿಮೋಚನೆ ಹೊಂದಿ ಆತ್ಮವಿಶ್ವಾಸ, ಸ್ವಾವಲಂಬನ, ಕರ್ತವ್ಯನಿಷ್ಠೆ, ಚಿತ್ತಪ್ರಸನ್ನತೆ ಮೊದಲಾದವುಗಳು ಅಳವಟ್ಟು ಜೀವನವನ್ನು ಒಂದು ಉತ್ಸವದಂತೆ ಕಾಣುವ ದೃಷ್ಟಿ ಹಾಗು ಅದರಲ್ಲಿ ಉತ್ಸಾಹದಿಂದ ಭಾಗವಹಿಸುವ ಪ್ರವೃತ್ತಿ ನೆಲೆಗೊಳ್ಳುವವು. ಇಷ್ಟು ಸಿದ್ಧತೆಯಾದರೆ ಬಾಳಿನಲ್ಲಿ ಗೆಲುವು ಕಟ್ಟಿಟ್ಟಹಾಗೆ. ಈ ಅವಸ್ಥೆಯಲ್ಲಿ ಕೊನೆಯಲ್ಲಿ ವ್ಯಕ್ತಿಯ ಜೀವನವು ಒಂದು ನಿರ್ದಿಷ್ಟವಾದ ರೂಪವನ್ನು ತಾಳುವುದು. ವ್ಯಕ್ತಿಯು ಆ ಬಳಿಕ ಬಾಳಿನಲ್ಲಿ ಸಾಧಿಸುವ ಕಾರ್ಯ, ಸಂಪಾದಿಸುವ ಜಯ, ಸಮಾಜಕ್ಕೆ ನೀಡುವ ಕಾಣಿಕೆ— ಇವೆಲ್ಲ ಅವನು ಈ ಮೂರೂ ಅವಸ್ಥೆಗಳಲ್ಲಿ ರೂಪಿಸಿಕೊಳ್ಳುವ ವ್ಯಕ್ತಿತ್ವವನ್ನು ಅವಲಂಬಿಸುತ್ತವೆ. ವ್ಯಕ್ತಿಗೆ ವಿಶಿಷ್ಟವಾದ ಗತಿಮತಿಗಳ ಸುತ್ತ ವ್ಯಕ್ತಿತ್ವವು ರೂಪಗೊಳ್ಳುತ್ತದೆ. ಯೋಗ್ಯವಾದ ಪರಿಸರದಲ್ಲಿ ಆ ಗತಿಮತಿಗಳು ವಿಕಸಿಸಿದರೆ ಜೀವನದ ಬಗೆಗೆ ವ್ಯಕ್ತಿಗೆ ಪ್ರಸನ್ನ ದೃಷ್ಟಿ, ಜೀವನವನ್ನು ಸಂತೋಷದಿಂದ ಸ್ವಾಗತಿಸುವ ಚಿತ್ತವೃತ್ತಿ ಪ್ರಾಪ್ತವಾಗುತ್ತವೆ

## ಬುದ್ಧಿಯ ವಿಕಾಸ:

ವ್ಯಕ್ತಿಯ ಆಂತರಿಕ ಬೆಳವಣಿಗೆಯಲ್ಲಿ ಅಡಕವಾಗುವ ಮುಖ್ಯ ಅಂಗಗಳು ಎರಡು: ಒಂದು ಬುದ್ಧಿಯ ವಿಕಾಸ; ಇನ್ನೊಂದು ಭಾವದ ವಿಕಾಸ. ಬುದ್ಧಿಯೆನ್ನುವ ವಸ್ತು ಶಿಶುವಿನಲ್ಲಿ ಸುಪ್ತವಾಗಿರುತ್ತದೆ. ಮಗು ಬೆಳೆದಂತೆ ಅದು ಅರಳತೊಡಗುವುದು. ಸಹಜ ಪ್ರವೃತ್ತಿಗಳ ಪ್ರೇರಣೆಯಿಂದ ನಡೆಯುವ ಕ್ರಿಯೆಯೂ ಆ ಕ್ರಿಯೆಯ ಪರಿಣಾಮವಾಗಿ ಉಂಟಾಗುವ ಅನುಭವವೂ ಈ ಬುದ್ಧಿಶಕ್ತಿಯ ವಿಕಾಸಕ್ಕೆ ನೆರವಾಗುತ್ತವೆ. ಬಾಳಿನಲ್ಲಿ ಒದಗುವ ಹೊಸ ಹೊಸ ಸನ್ನಿವೇಶಗಳನ್ನು ಅರ್ಥ ಮಾಡಿಕೊಳ್ಳುವ ಹಾಗು ಆ ಸನ್ನಿವೇಶಗಳಿಗೆ ತಕ್ಕಂತೆ ವರ್ತನೆಯನ್ನು ಹೊಂದಿಕೆಗೊಳಿಸುವುದು ಬುದ್ಧಿಯ ಕಾರ್ಯ. ಸನ್ನಿವೇಶಗಳು ಬುದ್ಧಿಯನ್ನು ಸಾಣೆಹಿಡಿದು ತೀಕ್ಷ್ಣಗೊಳಿಸಲು

ಕೂಡ ನೆರವಾಗುತ್ತವೆ. ಆದುದರಿಂದ ಮಗುವಿನ ಬುದ್ಧಿಯನ್ನು ಆಹ್ವಾನಿಸುವ ಹಾಗು ಅವನ ಉತ್ಸಾಹಕ್ಕೆ ಪ್ರೋತ್ಸಾಹನವಿತ್ತು ತೃಪ್ತಿಪಡಿಸುವ ತಕ್ಕ ಸನ್ನಿವೇಶಗಳನ್ನು ಒದಗಿಸುವುದೇ ಅವನ ಅಭಿವೃದ್ಧಿಯಲ್ಲಿ ಆಸಕ್ತರಾದ ಗುರುಹಿರಿಯರ ಪರಮ ಕರ್ತವ್ಯ ಮುಖ್ಯವಾಗಿ ಮಗುವಿನ ಆತ್ಮಪ್ರೌಢಿಮೆ ಹಾಗು ಕೌತುಕ ಪ್ರವೃತ್ತಿಗಳನ್ನು ಕೆರಳಿಸುವ ಸನ್ನಿವೇಶಗಳ ಮೂಲಕ ಬುದ್ಧಿಯನ್ನು ಅರಳಿಸಬಹುದು.

## ಭಾವ ಜೀವನದ ವಿಕಾಸ:

ಈಗ ಭಾವಜೀವನದ ವಿಕಾಸವನ್ನು ಕುರಿತು ಎರಡು ಮಾತುಗಳನ್ನು ಹೇಳಬೇಕು. ಶೀಲ ಮತ್ತು ಸಂಸ್ಕೃತಿ ಇವು ವ್ಯಕ್ತಿಯ ಭಾವಜೀವನದ ವಿಕಾಸವನ್ನು ಸೂಚಿಸುತ್ತವೆ. ಬುದ್ಧಿಯು ಹೇಗೆ ಮಾನವನ್ನು ಉಳಿದ ಪ್ರಾಣಿಗಳಿಂದ ಬೇರ್ಪಡಿಸುವುದೋ ಹಾಗೆ ಶೀಲ ಮತ್ತು ಸಂಸ್ಕೃತಿ ಇವು ಮಾನವನನ್ನು ಕೆಳದರ್ಜೆಯ ಪ್ರಾಣಿಗಳಿಂದ ಬೇರ್ಪಡಿಸುತ್ತವೆ. ತಕ್ಕ ಸನ್ನಿವೇಶಗಳ ಪ್ರೇರಣೆಯಿಂದ ವಿವಿಧ ಸಹಜ ಪ್ರವೃತ್ತಿಗಳಿಗೆ ಸಂಬಂಧಪಟ್ಟ ಭಾವಗಳನ್ನು ಅಥವಾ ರಾಗಗಳನ್ನು ಹಿತವಾಗಿ ಕೆರಳಿಸಿ ಅವುಗಳನ್ನು ಯೋಗ್ಯ ವಸ್ತುಗಳೊಡನೆ ಅಥವಾ ವಿಚಾರಗಳೊಡನೆ ಸಂಯೋಜನೆಗೊಳಿಸಿ ಒಳ್ಳೆಯ ಅನುರಾಗಗಳಲ್ಲಿ ಮತ್ತು ಅಭಿರುಚಿಗಳಲ್ಲಿ ಅವುಗಳನ್ನು ಸ್ಥಿರಗೊಳಿಸಬಹುದು. ವಾಚನಾಭಿರುಚಿ ದೇಶ ಭಕ್ತಿ, ಸತ್ಯಾನ್ವೇಷಣೆ, ಸಮಾಜ ಸೇವಾಪ್ರವೃತ್ತಿ–ಇವೇ ಮೊದಲಾದವುಗಳು ಒಳ್ಳೆಯ ಅಭಿರುಚಿಗಳ ಹಾಗು ಅನುರಾಗಗಳ ಉದಾಹರಣೆಗಳು ತಕ್ಕ ಪರಿಸರ ಹಾಗು ಮಾರ್ಗದರ್ಶನಗಳ ಏರ್ಪಾಡಿನಿಂದ ಒಳ್ಳೆಯ ಅನುರಾಗಗಳನ್ನು ನೆಲೆಗೊಳಿಸುವುದು ಸಾಧ್ಯ.

## ವ್ಯಷ್ಟಿ ಸಮಷ್ಟಿಗಳ ಸಂಬಂಧ

ಸಮಾಜವೇ ಆಗಲಿ, ರಾಷ್ಟ್ರವೇ ಆಗಲಿ ವ್ಯಕ್ತಿಗಳ ಸಮೂಹ ಒಂದು ರಾಷ್ಟ್ರದ ಶೀಲವು ರೂಪಗೊಳ್ಳಬೇಕಾದರೆ ಆ ರಾಷ್ಟ್ರದ ಅಂಗಗಳಾದ ವ್ಯಕ್ತಿಗಳ ಶೀಲ ಸುಂದರವಾಗಬೇಕು; ಬಂಧುರವಾಗಬೇಕು; ವ್ಯಕ್ತಿಗಳ ಶೀಲವು

ರಾಷ್ಟ್ರದ ಶೀಲವು ಒಂದು ಕಾಣಿಕೆ, ರಾಷ್ಟ್ರದ ಶೀಲವು ಅದರ ವ್ಯಕ್ತಿಗಳ ಶೀಲ ಸಂವರ್ಧನೆಗೆ ಒಂದು ಪ್ರೇರಣೆ. ಮತ್ತು ಇವು ಹೀಗೆ ಶೀಲಸಂವರ್ಧನೆಗೆ ವ್ಯಕ್ತಿ ಮತ್ತು ರಾಷ್ಟ್ರಗಳ ಪರಸ್ಪರ ಪೋಷಕವಾಗಬಲ್ಲುವು.

ನಮ್ಮ ರಾಷ್ಟ್ರವು ಸ್ವಾತಂತ್ರ್ಯವನ್ನು ಪಡೆದಂದಿನಿಂದ ಈಚೆಗೆ ಪ್ರಗತಿ ಪಥದಲ್ಲಿ ಮುಂದುವರಿಯುತ್ತದೆ. ಅದು ಶ್ರೇಷ್ಠ ರಾಷ್ಟ್ರವಾಗಬೇಕಾದರೆ ಅದರ ಬೆನ್ನೆಲುಬಿನಂತಿದ್ದ ಶೀಲ ಗಟ್ಟಿಗೊಳ್ಳಬೇಕು. ರಾಷ್ಟ್ರದ ಸರಿಯಾದ ಕಲ್ಪನೆ ಜನಸಾಮಾನ್ಯರಿಗೂ ಕೂಡ ಆದಾಗ ವ್ಯಕ್ತಿಗಳಜೀವನದಲ್ಲಿ ಪ್ರಾಮಾಣಿಕತೆ ಹೆಚ್ಚಾದಾಗ, ವ್ಯಕ್ತಿಗಳು ತಕ್ಕ ಆದರ್ಶಗಳನ್ನು ಮುಂದಿಟ್ಟುಕೊಂಡು ಅವುಗಳ ಸಾಧನೆಗೆ ಸಂತತವಾಗಿ ಶ್ರಮಿಸಿದಾಗ ಮಾತ್ರ ರಾಷ್ಟ್ರದ ಶೀಲ ಬಂಧುರವಾದೀತು.

---

# ಸಾಧನ ಸಾಹಿತ್ಯ



ಕೆಳದರ್ಜೆಯ ಪ್ರಾಣಿಗಳು ತಮ್ಮ ಹೊಟ್ಟೆ ತುಂಬಿದರೆ ಸಾಕು, ತೃಪ್ತಿಯನ್ನು ಪಡುವವು. ಸಾಹಿತ್ಯ, ಸಂಗೀತ, ಜೀವನಸೌಂದರ್ಯ ಮೊದಲಾದ ಹೆಚ್ಚಿನ ಬೆಲೆಗಳನ್ನು ಅವು ಅರಿಯವು. ಆದರೆ ಮಾನವನು ಎಲ್ಲವನ್ನೂ ಅಂದ ಚಂದಗೊಳಿಸುವ ಬಯಕೆಯನ್ನು ತಾಳಿ ಆ ರೀತಿ ವರ್ತಿಸುತ್ತಾನೆ. ಆ ಅಂದ ಚೆಂದಗಳನ್ನು ಬಾಳಿನಲ್ಲಿ ಅಳವಡಿಸಿಕೊಂಡು ಅವನು ಹೆಚ್ಚಿನ ಆನಂದವನ್ನು ಪಡೆಯಬಲ್ಲನು. ಕೇವಲ ದೈನಂದಿನದ ಊಟದ ವ್ಯವಸ್ಥೆಯನ್ನು ಗಮನಿಸಿದರೆ ಸಾಕು; ಅವನ ಈ ಅಂದ ಚಂದದ ಬಯಕೆಯ ಕಲ್ಪನೆಯಾಗದಿರದು; ಊಟಮಾಡುವ ಪಾತ್ರೆಗಳನ್ನು ಅವನು ಅಂದ ಚಂದಗೊಳಿಸಿಕೊಳ್ಳುತ್ತಾನೆ; ಆಸನಗಳನ್ನು ಅದೇ ರೀತಿ ನಿರ್ಮಿಸಿಕೊಳ್ಳುತ್ತಾನೆ; ಊಟಕ್ಕೆ ಕುಳಿತುಕೊಳ್ಳುವುದರಲ್ಲಿಯೂ ಒಂದು ಕ್ರಮವನ್ನು ಅನುಸರಿಸುತ್ತಾನೆ. ಊಟನಡೆದಾಗ ಊಟಕ್ಕೆ ಕುಳಿತ ಇತರರೊಡನೆ ಮಾತನಾಡಿ ಊಟದ ಸೊಗಸನ್ನು ಹೆಚ್ಚಿಸಿಕೊಳ್ಳುತ್ತಾನೆ.

ಪ್ರವೃತ್ತಿ ಮಾರ್ಗದಿಂದ ಮನವನ್ನು ಧ್ಯಾನ ಮೌನಗಳಿಗೆ ತಿರುಗಿಸಿದ ಆಧ್ಯಾತ್ಮ ಸಾಧಕರು ಕೂಡ ಕಲೆಯನ್ನು ರಚಿಸಿ ಸೌಂದರ್ಯ ರಸಾನುಭವವನ್ನು ಪಡೆಯುತ್ತ ಬಂದಿರುವರೆಂಬುದಕ್ಕೆ ಅಜಂತೆಯಲ್ಲಿ ಬೌದ್ಧ ಸನ್ಯಾಸಿಗಳು ಬರೆದು ನಿಲ್ಲಿಸಿದ ಅದ್ಭುತ ಚಿತ್ರಗಳು ( Fresco paintings ) ಸಾಕ್ಷಿಯಾಗಿ ನಿಂತಿವೆ. ಅದೇ ಮೇರೆಗೆ ಉಪನಿಷತ್ ಸಾಹಿತ್ಯವು ಭಾರತದ ಋಷಿಗಳ ಆಧ್ಯಾತ್ಮ ಜೀವನದ ಫಲವು. ಸಂಗೀತಕ್ಕೆ ಕೂಡ ಆಧ್ಯಾತ್ಮ ಜೀವನದ ಕಾಣಿಕೆ ಸಲ್ಲದೆ ಇಲ್ಲ. ಅದೆಷ್ಟೋ ಹಾಡುಗಳು ಭಕ್ತಿಯಿಂದಲೇ ಹೊಮ್ಮಿದ ಸಂಗತಿಯನ್ನು ಈ ಸಂದರ್ಭದಲ್ಲಿ ಗಮನಿಸಬೇಕು. ಶಿಲ್ಪಕಲೆಗೂ ಭಕ್ತಿಯ ಕಾಣಿಕೆ ತುಂಬಾ ಸಂದಿದೆ. ಹೀಗೆ ಊಟದಂತಹ ಒಂದು ಸಾಮಾನ್ಯ ಕ್ರಿಯೆ

ಯನ್ನು ಮೊದಲು ಮಾಡಿಕೊಂಡು ಆಧ್ಯಾತ್ಮದವರೆಗೆ ಜೀವನದಲ್ಲಿ ಸೌಂದ ರ್ಯವು ಹಬ್ಬಿ ಹರಡಬಹುದು. ಹಬ್ಬಿ ಹರಡುತ್ತ ಬಂದಿದೆ.

ಸುಂದರ ಜೀವನದ ಸೌರಭವೇ ಸಂಸ್ಕೃತಿ ಎಂದು ಈ ಮೊದಲೆ ಹೇಳ ಲಾಯಿತು. ಸಂಸ್ಕೃತಿಯ ಕಲ್ಪನೆಯಾದ ಮಾತ್ರಕ್ಕೆ ತೀರದು. ಸಂಸ್ಕೃತಿಯ ಸಂಪಾದನೆಯ ಮಾರ್ಗಗಳಾವುವು ಎಂಬುದು ಮುಖ್ಯ ವಿಷಯ. ಹಿಂದಿನ ಕಾಲದಲ್ಲಿ ಹಬ್ಬ ಹುಣ್ಣಿಮೆಗಳೂ, ಪುರಾಣ ಕೀರ್ತನೆಗಳೂ, ಜಾತ್ರೆಗಳೂ ನಿತ್ಯಜೀವನದ ಏಕತಾನದಿಂದ ಜನರನ್ನು ಒಂದಿಷ್ಟು ಮುಕ್ತಗೊಳಿಸಿ, ಹಲ ವಾರು ಜನರು ಉತ್ಸಾಹದಿಂದ ಒಂದೆಡೆ ಸೇರಿ ಸಂಪರ್ಕ ಬೆಳಸಿಕೊಳ್ಳುವ ಏರ್ಪಾಡುಗಳಾಗಿದ್ದವು. ತಿಳಿದವರೂ ತಿಳಿಯದವರೂ, ಹಿರಿಯರೂ ಕಿರಿ ಯರೂ, ಬಾಳಿನಲ್ಲಿ ನಯವಡೆದವರೂ ನಯವಡೆಯದವರೂ,ಹೀಗೆ ಕಲೆಯು ತ್ತಿದ್ದುದರ ಪರಿಣಾಮವಾಗಿ ಬಲ್ಲವರ ಬಾಳಿನ ಬೆಳಕು ಇತರರಿಗೆ ದೊರೆಯು ತ್ತಿದ್ದಿತು. ಈ ವಿಶೇಷ ಸಾಧನಗಳಲ್ಲದೆ ದೈನಂದಿನದ ಪಾಠಶಾಲೆಯು ಬಾಲ ಕರ ಬೆಳವಣಿಗೆಗೆ ನೆರವಾಗುತ್ತಲಿದ್ದಿತು; ಜೊತೆಗೆ ಗೃಹಶಿಕ್ಷಣವು ತನ್ನ ಕಾಣಿಕೆಯನ್ನು ಸಂಸ್ಕೃತಿಯ ಸಂವರ್ಧನಕ್ಕೆ ನೀಡುತ್ತಿದ್ದಿತು.

ನಾವು ತುಂಬಿದಂತೆ ಜೀವನ ತುಂಬುತ್ತದೆ; ನಮ್ಮ ಬಾಳನ್ನು ತುಂಬು ವವರು ಬಿಡುವವರು ನಾವೇ; ಬೇರೆಯವರಲ್ಲ. ತುಂಬಬೇಕೆನ್ನುವ ಮನ ಬೇಕು;ನಿಷ್ಠೆ ಬೇಕು. ಸರಸಭಾವಗಳಿಂದ, ಸತ್ಪ್ರೇರಣೆಯಿಂದ ಸುಜ್ಞಾನದಿಂದ, ಸಾಹಿತ್ಯದಿಂದ ಸಂಸ್ಕೃತಿಯಿಂದ, ಕಲೆಯಿಂದ, ಕಾಯಕದಿಂದ ತುಂಬಿದ ಬಾಳೇ ಬಾಳೆಂದು ನಂಬಿ ನಿಷ್ಠೆಯಿಂದ ಕಾರ್ಯತತ್ಪರರಾದಲ್ಲದೆ ಬಾಳು ತುಂಬದು; ನಮ್ಮ ಜೀವನ ಸಂಪತ್ತು ನಾವು ಸಂಗ್ರಹಿಸಿದ ಧನ ಧಾನ್ಯ ಮಾತ್ರವಲ್ಲ; ಮುಖ್ಯವಾಗಿ ಅದು ನಾವು ಅರಳಿಸಿಕೊಂಡ ಮನ. "ಮನೆ ನೋಡ್ಯಾಬಡವರು; ಘನಮನಸಂಪನ್ನರು" ಎಂದು ಶರಣರ ವಿಷಯದಲ್ಲಿ ಬಸವಣ್ಣನವರು ಆಡಿದ ಮಾತನ್ನು ಈ ದೃಷ್ಟಿಯಿಂದ ಅರ್ಥ ಮಾಡಿಕೊಳ್ಳ ಬೇಕು.

ಧನ ಧಾನ್ಯ, ಮತಮಾನ್ಯ, ವಿದ್ಯಾಬುದ್ಧಿ, ಚಿತ್ತಶುದ್ಧಿ ಕಲೆ, ಕಳೆ ಇವು ಒಂದರಿಂದ ಒಂದು ಏರಿಕೆಯ ಬೆಲೆಯ ಜೀವನಸಾಧನಗಳು. ಇವು

ಗಳ ಸಂಪಾದನೆ ಸಾಧನೆಯಿಂದಲ್ಲದೆ ಆಗದು. ನಿತ್ಯವೂ ನಿಯಮಿತ ಕ್ರಮ ದಲ್ಲಿ ಸಾಧನೆ ನಡೆದರೆ ಮಾತ್ರ ಜೀವನ ಸಿದ್ಧಿ ಸಾಧ್ಯ; ತೋಟಿಗನು ತನ್ನ ತೋಟದಲ್ಲಿ ನಿತ್ಯ ಕೃಷಿಗೈದು ಬೆಳೆಯನ್ನು ಬೆಳೆಯುವಂತೆ ಜೀವನ ಕ್ಷೇತ್ರ ದಲ್ಲಿ ನಿತ್ಯ ಕೃಷಿ ನಡೆದಾಗಲೆ ಕಂಪುವೆರೆದ ಹೂಗಳಂತೆ ರಸತುಂಬಿದ ಹಣ್ಣು ಗಳಂತೆ ಇರುವ ಜೀವನ ಕಲಾನಂದವು ನಮ್ಮದಾಗುವುದು.

ಯಾವುದೇ ವ್ಯಕ್ತಿಯ ಜೀವನವು ಸರ್ವಾಂಗ ಸುಂದರವಾಗಬೇಕಾದರೆ ಆ ವ್ಯಕ್ತಿಗೆ ಅನುಕೂಲ ಪರಿಸ್ಥಿತಿ ತಾನಾಗಿಯೇ ಸಿದ್ಧವಾಗಿರಬೇಕು; ಇಲ್ಲವೆ ಆವ್ಯಕ್ತಿ ತಕ್ಕ ಪರಿಸ್ಥಿತಿಯನ್ನು ನಿರ್ಮಾಣಮಾಡಿಕೊಳ್ಳಬೇಕು. ಸುಸಂಸ್ಕೃತ ಸಮಾಜದಲ್ಲಿ, ಅದರಲ್ಲಿಯೂ ಸುಸಂಸ್ಕೃತ ಮನೆತನದಲ್ಲಿ ಮೂಡಿ ಬೆಳೆಯುವ ವ್ಯಕ್ತಿಗೆ ಇಂತಹ ಪರಿಸರ ತಾನಾಗಿಯೇ ಒದಗಿ ಬರುತ್ತದೆ; ಹಾಗಾದರೆ ಜೀವನವು ತುಂಬುಜೀವನವಾಗಲು ನೆರವಾಗುವ ಮೊದಲ ಸಾಧನವೆಂದರೆ ಗೃಹಸಂಸ್ಕೃತಿ. ಗೃಹವೂ ಒಂದು ಚಿಕ್ಕ ಸಮಾಜ; ಆ ಚಿಕ್ಕ ಸಮಾಜದ ಒಂದು ಮುಖ್ಯ ಲಕ್ಷಣವೆಂದರೆ ಅದರಲ್ಲಿರುವ ಜನರ ಹೊಂದಿಕೆಯ ನಡತೆ. ಆ ಚಿಕ್ಕ ಸಮಾಜದ ವ್ಯಕ್ತಿಗಳು ಬೇರೆ ಬೇರೆ ಉದ್ಯೋಗಗಳನ್ನು ಸಾಗಿಸು ತ್ತಿರಬಹುದು; ಬೇರೆಬೇರೆ ಅಭಿರುಚಿ ಆಸಕ್ತಿಗಳನ್ನು ಬೆಳಸಿಕೊಂಡಿರಬಹುದು; ಆದರೂ ಎಲ್ಲರೂ ರಸಿಕರಾಗಿ ಸಮರಸ ಜೀವನವನ್ನು ಸಾಗಿಸುತ್ತಿರಬಹುದು; ಕವಿ ರವೀಂದ್ರರರ ಬೆಳೆದ ಮನೆತನವನ್ನು ಇಲ್ಲಿ ಉದಾಹರಿಸಬಹುದು. ಅವರೇ ತಮ್ಮ 'ಜೀವನಸ್ಮೃತಿ' ಯಲ್ಲಿ ಹೇಳಿದ ಹಾಗೆ ಅವರ ಮನೆಯ ಜನರಲ್ಲಿ ಕೆಲವರು ಚಿತ್ರಕಾರರಾಗಿದ್ದರು. ಕೆಲವರು ಕವಿಗಳಾಗಿದ್ದರು, ಕೆಲವರು ಸಂಗೀತಜ್ಞರಾಗಿದ್ದರು. ಕಲಾ ನಿರ್ಮಾಣವು ಅವರ ಮನೆತನದ ಜೀವ ಕಳೆಯಾಗಿದ್ದಿತು. ಅವರ ವಿಶಿಷ್ಟವಾದ ಅಭಿರುಚಿಗಳು ಭಿನ್ನವಾದಂತೆ ತೋರಿದರೂ ಅವರೆಲ್ಲ ಕಲಾವಿದರೂ ರಸಜ್ಞರೂ ಆಗಿದ್ದರು.

ಒಳ್ಳೆಯ ಶಾಲೆ ಇಂತಹ ಇನ್ನೊಂದು ಸಾಧನ. ಅಲ್ಲಿಯ ಪುಸ್ತಕ ಭಾಂಡಾರ, ಪ್ರಯೋಗಶಾಲೆ, ಹೂದೋಟ, ಆಟದ ಬೈಲು-ಇವೆಲ್ಲವೂ ಜೀವನ ವನ್ನು ಒಳಗಿನಿಂದ ತುಂಬಲು ಸಾಧನ ಸಾಮುಗ್ರಿಗಳಾಗಿ ಪರಿಣಮಿಸುವವು. ಶರೀರದ ಬೆಳವಣಿಗೆಗೆ ಆಟದ ಬೈಲು ಹೇಗೋ ಹಾಗೆ ಮನದ ಬೆಳವಣಿಗೆಗೆ

ವಾಚನಾಲಯ. ಜ್ಞಾನ ಸಂಪಾದನೆಗೆ ವಾಚನಾಲಯದಂತಹ ಸಾಧನ ಬೇರೊಂದಿಲ್ಲ. ಹೂದೋಟವು ನಿಸರ್ಗ ನಿರೀಕ್ಷಣೆಯನ್ನು ಪ್ರೇರಿಸಿ ನಿರೀಕ್ಷಣಾ ಶಕ್ತಿಯನ್ನು ಪ್ರೇರಿಸುವ ಸಾಧನ.

## ಸಭೆ ಸಮ್ಮೇಲನಗಳು:

ನಿತ್ಯದ ಈ ಸಾಧನೆಗಳಲ್ಲದೆ ಸಂದರ್ಭಾನುಸಾರವಾಗಿ ನಡೆಯುವ ಕಾರ್ಯಕ್ರಮಗಳು ಸರ್ವಾಂಗ ಸುಂದರ ಜೀವನ ನಿರ್ಮಾಣಕ್ಕೆ ಕಾರಣವಾಗಬಹುದು. ಅವುಗಳಲ್ಲಿ ಸಭೆ ಸಮ್ಮೇಲನಗಳನ್ನು, ಸಂಗೀತಗೋಷ್ಠಿಗಳನ್ನು, ಉತ್ಸವಗಳನ್ನು ಉದಾಹರಿಸಬಹುದು. ಇವು ಆಗೊಮ್ಮೆ ಈಗೊಮ್ಮೆ ನಡೆಯಬಹುದಾದರೂ ಅವು ಸಾಮೂಹಿಕ ಕಾರ್ಯಕ್ರಮಗಳಾಗಿರುವುದರಿಂದ ಹೆಚ್ಚು ಪರಿಣಾವನ್ನೂ ಉಂಟುಮಾಡಬಹುದು. ಏಕೆಂದರೆ ಸಹಾನುಭೂತಿ ರಸಾನುಭೂತಿಯನ್ನು ಯಾವಾಗಲೂ ಹೆಚ್ಚಿಸುತ್ತದೆ. ಪೂರ್ವಕಾಲದಲ್ಲಿ ಪುರಾಣ ಕೀರ್ತನೆಗಳು ಗಳಿಸಿದ್ದ ಸ್ಥಾನವನ್ನು ಇಂದು ಹೆಚ್ಚು ಹೆಚ್ಚಾಗಿ ಸಭೆ ಸಮ್ಮೇಲನಗಳು ಪಡೆಯುತ್ತಿವೆ. ಸಭೆಗಳು ಗೊಂದಲದ ಕಾರ್ಯಕ್ರಮಗಳಾಗದೆ ವಿದ್ವಾಂಸರ ವ್ಯಾಖ್ಯಾನಗಳನ್ನು ಒಳಗೊಳ್ಳಬೇಕು. ಸಮ್ಮೇಲನಗಳು ಯಾವ ಬೆಳಕನ್ನೂ ಬೀರದೆ ಬರಿ ಕಿಚ್ಚನ್ನು ತೂರುವ ಚರ್ಚೆಗಳ ಮೇಳಗಳಾಗದೆ ಸುವಿಚಾರದಿಂದ ಕೂಡಿದ ರಚನಾತ್ಮಕ ಕಾರ್ಯಕ್ರಮಗಳನ್ನು ರೂಪರೇಷೆಗೊಳಿಸುವ ಸುವರ್ಣ ಸಂದರ್ಭಗಳಾಗಿ ಪರಿಣಮಿಸಬೇಕು. ಕಾಗದದ ಗೊತ್ತುವಳಿಗಳಿಂದ ಏನೂ ಪ್ರಯೋಜನೆಯಿಲ್ಲ. ಆ ನಿರ್ಣಯಗಳ ಕಾರ್ಯರೂಪಕ್ಕೆ ಇಳಿಯುವವಂಥ ಯೋಜನೆಗಳಿಗೆ ಸಂಬಂಧಿಸಿದವುಗಳಾಗಿರಬೇಕು.

## ಪ್ರದರ್ಶನಗಳು :

ಜ್ಞಾನ ಹಾಗೂ ಸಂಸ್ಕೃತಿಗಳ ಪ್ರಸಾರವು ಸಭೆ ಸಮ್ಮೇಲನಗಳಿಗಿಂತ ಪ್ರದರ್ಶನಗಳ ವ್ಯವಸ್ಥೆಯಿಂದ ಹೆಚ್ಚಾಗಿ ಆಗಬಹುದೆಂದು ಕಾಣುತ್ತದೆ. ಏಕೆಂದರೆ ನಮ್ಮ ಜೀವನದಲ್ಲಿ ಕಿವಿಗಿಂತ ಕಣ್ಣು ಹೆಚ್ಚಾಗಿ ಕಾರ್ಯ ಮಾಡುತ್ತದೆ. ಪ್ರಪಂಚದ ಅನುಭವ ನಮಗೆ ಕರ್ಣೇಂದ್ರಿಯಕ್ಕಿಂತ ಹೆಚ್ಚಾಗಿ ನಯ

ನೇಂದ್ರಿಯದಿಂದ ಉಂಟಾಗುತ್ತದೆ. ನಮ್ಮ ಕೌತುಕ ಕೆರಳುವುದು ಹೆಚ್ಚಾಗಿ ವಿಶ್ವದ ವಿವಿಧ ದೃಶ್ಯಗಳಿಂದ. ನಮ್ಮ ಅಂತರಂಗ ದರ್ಶನೋತ್ಸುಕವಾಗಿರುವುದೇ ಹೆಚ್ಚು. ಕಣ್ಣಿಂದ ಕಂಡದ್ದು ಮನದಲ್ಲಿ ನಿಚ್ಚಳವಾಗಿ ಮೂಡುತ್ತದೆ. ಆದುದರಿಂದಲೇ 'ಪ್ರತ್ಯಕ್ಷ ಜ್ಞಾನ' ಎಂಬ ಪ್ರಯೋಗ ಬಳಕೆಯಲ್ಲಿ ಬಂದಿದೆ.

ಕೇಳಿ ತಿಳಿದುಕೊಳ್ಳುವುದಕ್ಕಿಂತ ಕಂಡು ತಿಳಿದುಕೊಳ್ಳುವುದು ಸುಲಭ. ಆದುದರಿಂದ ಕಂಡು ತಿಳಿದು ಕೊಳ್ಳಲು ನೆರವಾಗುವ ಉದ್ದೇಶದಿಂದ ಏರ್ಪಡಿಸಿದ ಪ್ರದರ್ಶನಗಳು ನಿಜವಾಗಿಯೂ ಪರಿಣಾಮಕಾರಕವಾಗುತ್ತವೆ. ಪ್ರಪಂಚದ ವಿವಿಧ ಅಂಗಗಳ ಹಾಗು ರಂಗಗಳ ಪರಿಜ್ಞಾನವನ್ನು ಮಾಡಿಕೊಡುವ ವಿಧ ವಿಧದ ಪ್ರದರ್ಶನಗಳು ನಾಡಿನಲ್ಲಿ ಆಗಾಗ ಏರ್ಪಡಿಸುವುದು ಅವಶ್ಯಕ. ಕೃಷಿಪ್ರದರ್ಶನ, ಉದ್ಯೋಗ ಪ್ರದರ್ಶನ, ಯಂತ್ರಪ್ರದರ್ಶನ,- ಇವೇ ಮೊದಲಾದವುಗಳು ಉಪಯುಕ್ತತೆಯ ದೃಷ್ಟಿಯಿಂದ ಮಹತ್ವದ ಪ್ರದರ್ಶನಗಳು. ಗ್ರಂಥಪ್ರದರ್ಶನ, ಚಿತ್ರ ಪ್ರದರ್ಶನ, ಕಲಾ ಪ್ರದರ್ಶನ,– ಇವೇ ಮೊದಲಾದವುಗಳು. ಸಂಸ್ಕೃತಿಯ ಪ್ರಸಾರದ ದೃಷ್ಟಿಯಿಂದ ಪ್ರಯೋಜನಕರವಾದವುಗಳು, ಒಂದು ದೊಡ್ಡ ಪ್ರದರ್ಶನದ ಸ್ಥಳದಲ್ಲಿ ಸುತ್ತು ಮುತ್ತಲಿನ ಅನೇಕ ಜನ ಬಂದು ಸೇರುವುದರಿಂದ ಹೆಚ್ಚಿನ ಪ್ರಯೋಜನವೂ ಆಗಬಹುದು.

## ಉತ್ಸವಗಳು :

ಉತ್ಸವಗಳೂ ಇವೇ ಬಗೆಯ ಸಾಧನವನ್ನು ಸೂಚಿಸುತ್ತವೆ. 'ಉತ್ಸವ' ಮತ್ತು 'ಉತ್ಸಾಹ'— ಇವು ಅರ್ಥದಲ್ಲಿ ಒಂದನ್ನೊಂದು ವಿಶೇಷವಾಗಿ ಹೋಲುತ್ತವೆ. ಉತ್ಸಾಹವಿಲ್ಲದೆ ಉತ್ಸವವಾಗಲಾರದು. ಉತ್ಸಾಹವು ಹೊಮ್ಮಿ ಹೊನಲಾಗಿ ಹರಿಯುವದಕ್ಕೆ ಉತ್ಸವವೊಂದು ದಾರಿ. ಮಾನವನಲ್ಲಿ ಹುದುಗಿರುವ ಜೀವನೋತ್ಸಾಹವು ಆಗಾಗ ಉತ್ಸವಗಳ ನೆಪದಲ್ಲಿ ಹೊರಹೊಮ್ಮಲೆಳಸುತ್ತದೆ. ಎಳೆಯರ ಬಾಳು ಬಣ್ಣ ಬಣ್ಣದಿಂದ ತುಂಬುವುದು ರಂಗು ರಂಗಾಗಿ ನಡೆಯುವ ಉತ್ಸವಗಳಿಂದ. ಋತುಮಾನವನ್ನು ಅನುಸರಿಸಿ ಸಾಗುವ ಉತ್ಸವಗಳಂತೂ ಮಾನವ ಜೀವನವನ್ನು ಪ್ರಕೃತಿಯ ವರ್ಣದಲ್ಲಿ ಮಿಂಯಿಸಿ ಸಚೇತನಗೊಳಿಸಲು ಬಹಳ ಅನುಕೂಲವಾದವುಗಳು.

ಗಜಾನನೋತ್ಸವ, ನಾಡಹಬ್ಬ, ದೀಪೋತ್ಸವ, ಸಂಕ್ರಮಣ, ಹೋಳಿಯ ಹುಣ್ಣಿಮೆ, ಯುಗಾದಿ- ಮೊದಲಾದ ಪರ್ವಗಳೂ ನಮ್ಮ ನಾಡಿನಲ್ಲಿ ಬಹು ಪೂರ್ವಕಾಲದಿಂದ ನಡೆಯುತ್ತ ಬಂದಿವೆ. ಜೀವನಕ್ಕೆ ಹೊಸ ರಸವನುಣ್ಣಿಸುತ್ತ ಬಂದಿವೆ. ಹೊಸ ಯುಗಕ್ಕೆ ತಕ್ಕಂತೆ ಹೊಸ ಉತ್ಸವಗಳು ನಮ್ಮ ರಾಷ್ಟ್ರದಲ್ಲಿ ಬಳಕೆಗೊಳ್ಳುತ್ತಿರುವುದು ಶುಭೋದಯುದ ಚಿಹ್ನೆ. ವನಮಹೋತ್ಸವ, ನಾಟ್ಯೋತ್ಸವ, ಯುವಜನೋತ್ಸವಗಳು ಹೀಗೆ ಹೊಸತಾಗಿ ರೂಢಗೊಳ್ಳುತ್ತಿರುವ ಉತ್ಸವಗಳು ಸರಕಾರವು ಉತ್ಸವಗಳಿಗೆ ಪ್ರೇರಣೆಯನ್ನು ನೀಡುತ್ತಿರುವುದರಿಂದ ಉತ್ತೇಜನವನ್ನು ಕೊಡುತ್ತಿರುವುದರಿಂದ ರಾಷ್ಟ್ರದ ಸಾಂಸ್ಕೃತಿಕ ಉನ್ನತಿಗೆ ಅವುಗಳಿಂದ ಉಪಕಾರವಾಗಬಹುದೆಂಬ ನೀರಿಕ್ಷೆಯಿದೆ. ರಾಷ್ಟ್ರದಲ್ಲಿ ನೂತನ ಚೇತನವನ್ನು ಹರಿಯಿಸಿ ರಾಷ್ಟ್ರದ ಸುಪ್ತ ಶಕ್ತಿಗಳನ್ನು ಜಾಗ್ರತಗೊಳಿಸಿ ಅವುಗಳನ್ನು ಉದಾತ್ತವಾದ ಆದರ್ಶ ಸಾಧನೆಯತ್ತ ತಿರುಗಿಸುವಲ್ಲಿ ಈ ಹೊಸ ಉತ್ಸವ ತುಂಬಾ ಪ್ರಯೋಜನವಾಗಬಹುದು. ಭಾರತದ ಪುರಾತನ ಸಂಸ್ಕೃತಿಯನ್ನು ಮತ್ತೆ ಸಜೀವಗೊಳಿಸಿ ಅದನ್ನು ನೂತನ ಯುಗಧರ್ಮದೊಡನೆ ಸಮರಸಗೊಳಿಸುವ ಕಾರ್ಯವೂ ಯುವಜನೋತ್ಸವದಿಂದ ಸಾಧ್ಯವಾಗಬಹುದಾಗಿದೆ. ಭಾರತದ ಸಂಗೀತ, ಸಾಹಿತ್ಯ, ಸಂಸ್ಕೃತಿ, ಕಲೆ ಇವುಗಳ ಪುನರುಜ್ಜೀವನಕ್ಕೆ ಸ್ವತಂತ್ರ ಭಾರತದಲ್ಲಿ ಹೆಚ್ಚು ಹೆಚ್ಚಾಗಿ ಆಸ್ಪದ ಮಾತ್ರವಲ್ಲ, ಸ್ಫೂರ್ತಿಯೂ ದೊರೆಯುತ್ತಿರುವ ಸಂಗತಿಯು ತುಂಬಾ ಸಂತೋಷಕರವಾದುದು. ಭಾರತದ ವಿವಿಧ ವಿಶ್ವವಿದ್ಯಾಲಯಗಳ ತರುಣ ಪ್ರತಿನಿಧಿಗಳು ಭಾರತದ ನಾನಾ ಭಾಗಗಳಿಗೆ ವಿಶಿಷ್ಟವಾದ ಕಲೆಗಳನ್ನು ಭಾರತಕ್ಕೆ ಸರ್ವಸಾಧಾರಣವಾದ ಜೀವಕಳೆಯ ಬೆಳಕಿನಲ್ಲಿ ದಿಲ್ಲಿಯಲ್ಲಿ ಪ್ರದರ್ಶಿಸುವಂತೆ ಭಾರತ ಸರಕಾರವು ನೀಡುತ್ತಿರುವ ಪುರಸ್ಕಾರವು ಭಾರತದ ಸರ್ವತೋಮುಖವಾದ ಉನ್ನತಿಯ ಉದ್ದೇಶ ಸಾಧನೆಗೆ ತುಂಬಾ ಪ್ರೇರಕ ಶಕ್ತಿಯಾಗಿ ಪರಿಣಮಿಸುವುದರಲ್ಲಿ ಸಂದೇಹ ತೋರುವುದಿಲ್ಲ.

ಅದರಂತೆ ನಾಟ್ಯೋತ್ಸವವೂ ರಾಷ್ಟ್ರದ ಪುನರ್ನಿರ್ಮಾಣಕ್ಕೆ ತನ್ನ ಕಾಣಿಕೆಯನ್ನು ನೀಡಬಲ್ಲದು. ಹತ್ತಿಕ್ಕಲ್ಪಟ್ಟ ಭಾವಗಳನ್ನು ನಾಟಕಗಳು ವಿಮೋಚನಗೊಳಿಸಬಲ್ಲವು; ಜೊತೆಗೆ ಜನತೆಯ ಮುಂದೆ ಒಳ್ಳೆಯ ಆದರ್ಶ

ಗಳನ್ನು ಅವು ಎತ್ತಿ ಹಿಡಿದು ಉತ್ತಮ ಜೀವನದ ನೆಲೆ ಕಲೆಗಳನ್ನು ಅವು ಪರಿಣಾಮಕಾರಕವಾಗಿ ಸೂಚಿಸಬಲ್ಲವು. ಉತ್ತಮ ಸಾಹಿತ್ಯ ನಿರ್ಮಾಣಕ್ಕೂ ಅಭಿನಯ ಕಲೆಗೂ ಅವುಗಳಿಂದ ಉತ್ತೇಜನ ದೊರೆಯುವುದರಲ್ಲಿ ಸಂದೇಹವಿಲ್ಲ. ರಂಗು ರಂಗಾದ ಜೀವನವಿಂತಿರಬೇಕೆಂಬುದನ್ನು ರಂಗಭೂಮಿ ಸುಳಹುಗಾಣಿಸದಿರದು. ಈ ಉದ್ದೇಶವು ಈಡೇರಬೇಕಾದರೆ ನಾಟ್ಯೋತ್ಸವಕ್ಕಾಗಿ ಆಯ್ಕೆ ಹೊಂದುವ ನಾಟಕಗಳನ್ನು ನಿಷ್ಠುರವಾದ ಪರೀಕ್ಷೆಗೆ ಗುರಿಮಾಡುವುದು ಅತ್ಯಗತ್ಯ.

ಅದೇನು ಯುಗಧರ್ಮವೋ ಏನೋ, ಇಂದು ಪ್ರೇಮ ಚಿತ್ರಪಟಗಳ ಗಾಳಿಗೆ ಸಿಕ್ಕಿ ನಾಟಕ ಕಲೆ ಹಿಮ್ಮೆಟ್ಟುತ್ತಿದೆ; ಹಿಮ್ಮೆಟ್ಟಿದೆ ಎಂದರೂ ಸಲ್ಲುವುದು. ಇಂತಹ ಪರಿಸ್ಥಿತಿಯಲ್ಲಿ ನಾಟ್ಯೋತ್ಸವದ ಮೂಲಕ ಹಿಂದಿನಿಂದ ಬಂದ ಬಂಧುರವಾದ ನಾಟ್ಯಕಲೆಗೆ ಮತ್ತೆ ಪ್ರೇರಣೆ ದೊರೆಯುತ್ತಿರುವುದು ನಿಜವಾಗಿಯೂ ಸಂತೋಷ ಪಡತಕ್ಕ ಸಂಗತಿ.

ಇತ್ತೀಚೆಗೆ ಚಿತ್ರಪಟಗಳು (ಸಿನೀಮಾ) ಜನಮನೋರಂಜನೆಗಾಗಿ ಮುಖ್ಯ ಪಾತ್ರವನ್ನು ವಹಿಸುತ್ತಿರುವವಷ್ಟೇ ? ಅವುಗಳನ್ನು ಜ್ಞಾನಪ್ರಸಾರದ ಹಾಗು ಸಂಸ್ಕೃತಿ ಪ್ರಸಾರದ ಸಾಧನಗಳನ್ನಾಗಿ ಉಪಯೋಗ ಮಾಡಿಕೊಳ್ಳಲು ಬರುವುದೆಂಬುದನ್ನು ಕೆಲವು ಉತ್ತಮ ಚಿತ್ರಪಟಗಳು ಮನಗಾಣಿಸಿ ಕೊಟ್ಟಿವೆ. ವಿದ್ಯಾರ್ಥಿಗಳು ಅದರಲ್ಲಿಯೂ ತಾರುಣ್ಯದೆಶೆಯಲ್ಲಿದ್ದ ವಿದ್ಯಾರ್ಥಿಗಳ ಶೀಲವನ್ನು ಸಂವರ್ಧನಗೊಳಿಸುವ ಚಿತ್ರಪಟಗಳು ನಮ್ಮಲ್ಲಿ ಇಲ್ಲವೆನ್ನುವಷ್ಟು ವಿರಳ. ಜಾಗ್ರತಿ,... ಮೊದಲಾದ ಒಂದೆರಡು ಶೈಕ್ಷಣಿಕ ಚಿತ್ರಪಟಗಳು ಇತ್ತೀಚೆಗೆ ಹೊರಟಿವೆ; ಈ ಮಾದರಿಯ ಚಿತ್ರಪಟಗಳು ಹೆಚ್ಚಿದಷ್ಟೂ ವಿಹಿತ. ಭೂಗೋಲ, ಇತಿಹಾಸ, ವಿಜ್ಞಾನ, ಸಂಸ್ಕೃತಿ- ಈ ಎಲ್ಲ ಕ್ಷೇತ್ರಗಳಿಗೆ ಸಂಬಂಧಪಟ್ಟ ಜ್ಞಾನವನ್ನು ಪ್ರತ್ಯಕ್ಷವೆಂಬಂತೆ ಚಿತ್ರಪಟಗಳ ಮೂಲಕ ಕೊಡುವುದು ಸಾಧ್ಯ. ಚಿತ್ರಪಟ ಉದ್ಯಮವನ್ನು ಕೈಕೊಂಡವರೂ ದಿಗ್ದರ್ಶಕರೂ ಇತ್ತ ಗಮನ ಪೂರೈಸಿದರೆ ರಾಷ್ಟ್ರದ ದೃಷ್ಟಿಯಿಂದ ದೊಡ್ಡ ಕಾರ್ಯವಾಗದಿರದು.

ಶಿಕ್ಷಣ ಹಾಗು ಸಂಸ್ಕೃತಿಗಳ ಪ್ರಸಾರಕ್ಕೆ ಕಾರಣವಾಗುತ್ತಿರುವ ಹಾಗು ಇನ್ನೂ ಹೆಚ್ಚಿಗೆ ಕಾರಣವಾಗಬಲ್ಲ ಇನ್ನೊಂದು ಸಾಧನವೆಂದರೆ ಆಕಾಶವಾಣಿ. ಈ ಸಾಧನವು ಮೆಲ್ಲನೆ ಹಳ್ಳಿಗಳಿಗೂ ಕೂಡ ಒದಗಿ ಬರುತ್ತಿರುವುದು ನಾಡಿನ ದೃಷ್ಟಿಯಿಂದ ಒಂದು ಸುದೈವ. ಬಾನುಲಿ ಕಟ್ಟೆಯಿಂದ ಹೊರಡುವ ದನಿ ಹಳ್ಳಿಗರಿಗೂ ಕೂಡ ಬಂದು ಮುಟ್ಟಿ ಅವರಿಗೆ ಶಿಕ್ಷಣವನ್ನು ಪೂರೈಸುವಂತಾಗಬೇಕು. ಈ ದೃಷ್ಟಿಯಿಂದ ಆಕಾಶವಾಣಿಯ ಹೊಣೆ ಬಹು ದೊಡ್ಡದಾಗಿದೆ. ಕೇವಲ ಮನೋರಂಜನೆಗಾಗಿ ಆಕಾಶವಾಣಿಯ ಕಾರ್ಯಕ್ರಮಗಳು ಏರ್ಪಡಿಸುವುದು ವಿಹಿತವಲ್ಲ. ಮನೋರಂಜನೆ ಬೇಡವೆಂತಲ್ಲ; ಅವಶ್ಯವಾಗಿಬೇಕು. ಮನೋರಂಜನೆಯು ಮನಸ್ಸಿಗೆ ಬೆಳಕನ್ನೂ ಬೀರುವಂತಾಗಬೇಕು. ಜನತೆಯ ಬಾಳನ್ನು ಎಲ್ಲ ಬಗೆಯಿಂದಲೂ ಮೇಲಕ್ಕೆತ್ತುವ ಉದ್ದೇಶವನ್ನಿಟ್ಟುಕೊಂಡು ಬಾನುಲಿ ಕಾರ್ಯಕ್ರಮಗಳು ಏರ್ಪಡುವುದು ವಿಹಿತ.

ಜೀವನವು ರಂಗು ರಂಗಾಗಬೇಕೆಂದು ಬಯಸುವುದು ತಪ್ಪಲ್ಲ; ಪ್ರಕೃತಿಯ ದೃಶ್ಯಗಳನ್ನು ನೋಡಿದರೆ ಅವೆಲ್ಲ ರಂಗುರಂಗಾಗಿಯೇ ರೂಪಗೊಂಡಿರುತ್ತವೆ. ಮಾನವನ ಬಾಳೂ ಅದರಂತೆ ಸಡಗರದೊಡನೆ ಸಾಗಬೇಕು; ಸೊಗಸನ್ನು ಬೀರಬೇಕು. ಕೆಲವು ಹಳೆಯ ಅರ್ಥಪೂರ್ಣವಾದ ಉತ್ಸವಗಳನ್ನೂ ಸಂಪ್ರದಾಯಗಳನ್ನೂ ಉಳಿಸಿಕೊಂಡು ಹೊಸ ಕಾಲಕ್ಕೆ ತಕ್ಕ ಹೊಸ ಉತ್ಸವಗಳನ್ನು ನಿರ್ಮಿಸಿಕೊಳ್ಳುವುದು ಅತ್ಯಂತ ಆವಶ್ಯಕ. ಬೆಳೆಯುವ ಜೀವನಕ್ಕೆ ಇಂತಹ ಉತ್ಸವಗಳೂ ಸಂಪ್ರದಾಯಗಳೂ ಸ್ಫೂರ್ತಿಯ ಸೆಲೆಗಳಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ; ಮುಂದೆ ಹೂ ಬಿಡಬೇಕಾದ ಬಳ್ಳಿಗೆ ಇಂದು ನೀರೆರೆಯ ಬೇಕಷ್ಟೇ! ಹಾಗೆಯೇ ಮುಂದೆ ಸೊಗಸಾಗಿ ಪಲ್ಲವಿಸಬಹುದಾದ ಜೀವನಲತೆಗೆ ಸರಿಯಾದ ಪರಿಸರ ಪೋಷಣೆಗಳನ್ನೊದಗಿಸುವುದು ಇಂದಿನವರ ಕರ್ತವ್ಯ.

---

# ಸಂಸ್ಕೃತಿ ಸೌರಭ



**ಸೌರಭದ ಸೆಳೆತ:**

ಸುಗಂಧ, ಸುವಾಸನೆ, ಪರಿಮಳ ಕಂಪು ಈ ಎಲ್ಲ ಶಬ್ದಗಳು ಒಂದೇ ಅರ್ಥವನ್ನು ಕೊಡುತ್ತವೆ. ಸೌರಭದ ಅರ್ಥವೂ ಸಾಮಾನ್ಯವಾಗಿ ಅದೇ. ಆದರೆ ಸೌರಭ ಎಂಬ ಶಬ್ದದಲ್ಲಿಯೇ ಒಂದು ಸೌರಭವಿದೆ. ಕೇವಲ ಘ್ರಾಣೇಂದ್ರಿಯವನ್ನು ತಣಿಸುವ ಸೌರಭವಲ್ಲ ಅದು; ಘ್ರಾಣೇಂದ್ರಿಯದ ಆಚೆಗಿನ ಯಾವುದೋ ಒಂದು ಸೂಕ್ಷ್ಮ ಇಂದ್ರಿಯ ಅನುಭವಿಸುವ ಅನುಭವ ವದು. ನನಗಾದರೋ 'ಸೌರಭ' ಸೂಸಿದ ಅರ್ಥ ಸ್ವಾರಸ್ಯಮಯವಾದುದು. ನನ್ನ ಮನಸ್ಸನ್ನು ಅದು ಹೇಗೋ ಸೆರೆಹಿಡಿದಿದೆ.

ಮುಂಗಾರಿ ಮಳೆಯ ಮೊದಲ ಸೆಳಕು ಇಳೆಯ ತೃಷೆಯನ್ನು ತಣಿಸಿದಾಗ ದೂರದಿಂದ ತೇಲಿಬರುವ ಆಮೋದವನ್ನು ನೀವು ಅನುಭವಿಸಿದ ನೆನಪಿದೆ ಯಷ್ಟೇ? ಜೋಳದ ಬೆಳೆ ಹೊಡೆಯೆತ್ತುವಾಗ ದೂರದಿಂದ ಗಾಳಿಯಲ್ಲಿ ಸೂಸಿ ಬರುವ ಸೌರಭವನ್ನು ಸವಿದು ಹುಮ್ಮಸಗೊಂಡ ನೆನಪು ನಿಮಗೆ ಆಗಾಗ ಬರ ಬಹುದಷ್ಟೇ? ಗುಡಿಯ ಬಾಗಿಲ ಸೇರಿದಾಗ ಗರ್ಭ ಗುಡಿಯ ಪುಷ್ಪ ಧೂಪಗಳ ಗಂಧ ಹರಡಿಬಂದ ಸ್ಮರಣೆ ನಿಮಗೆ ಒಮ್ಮೊಮ್ಮೆ ಬರುತ್ತಿರಬಹುದಷ್ಟೇ? ನೆನಪಿನೊಡನೆ ತೀಡಿ ಬಂದ ಸೌರಭ ಎಷ್ಟು ನಯವಾದುದು! ಎಷ್ಟು ಆಹ್ಲಾದಕರವಾದುದು! ಅದು ಸೌರಭದ ಸೌರಭ.

**ಸೌರಭದ ಸಂಪತ್ತು**

ಸೌರಭವು ನಮ್ಮ ಧರಣಿಯ, ಅದರಂತೆ, ನಮ್ಮ ಸ್ಮರಣೆಯ ಸಂಪತ್ತು; ಸುಖ. ತಾಯಿ ಪೃಥ್ವಿ ತಾನು ಪ್ರಾಣಿಗಳಿಗೆ ನೀಡಿದ ದಾನದ ಪರಿಣಾಮವಾಗಿ

ಆದ ಆನಂದವನ್ನು ಆಮೋದದ ಮೂಲಕವೇ ವ್ಯಕ್ತಗೊಳಿಸುತ್ತಾಳೆ. ಹೂವು ಅರಳಿದಾಗ ಹಣ್ಣು ಮಾಗಿದಾಗ ಅವಳ ಎದೆಯಲ್ಲಿ ಅಡಗಿದ ಅದೆಷ್ಟು ಬಗೆಯ ಕಂಪನ್ನು ತುಂಬಿಕೊಂಡು ಬರುತ್ತವೆ! ಅಂತೂ ಕಂಪು ಭೂಮಿತಾಯಿಯ ಹೃದಯ ಸಂಪತ್ತು, ಪ್ರಥಿವಿ ಪ್ರಾಮುಖ್ಯವಾಗಿ ಗಂಧವತಿಯೆಂದು ಕಾಣುತ್ತದೆ. ಈ ಸಂಗತಿಯನ್ನು ಸಾರಲೆಂದೇ ಗಾಳಿ ಗಂಧವನ್ನು ತಾನು ಸುಳಿದೆಡೆಯೆಲ್ಲೆಲ್ಲ ಬೀರುತ್ತದೆ. ಗಿಡಬಳ್ಳಿಗಳು ನೆಲದೊಡಲಿಂದ ಎತ್ತಿಕೊಂಡು ಬಂದ ಪರಿಮಳವನ್ನು ಗಾಳಿ ಹೊತ್ತುಕೊಂಡು ಅಲೆಯುತ್ತದೆ; ಗಂಧವಹನೆಂಬ ಹೆಸರು ಗಾಳಿಗೆ ಬಂದುದು ಈ ಕಾರಣದಿಂದಲೇ. ನೆಲದಲ್ಲಿ, ಜಲದಲ್ಲಿ, ಗಾಳಿಯಲ್ಲಿ, ಗಗನದಲ್ಲಿ ತುಂಬಿದ ಗಂಧವನ್ನು ದೂರೋ ತುಂಬುಗೈಗಳಿಂದ ನೀಡುತ್ತಿರುವುದು ಒಂದು ಅನುಗ್ರಹವಲ್ಲದೆ ಇನ್ನೇನು? ಹೀಗೆ ಸರ್ವತ್ರ ಹರಡಿರುವ ಸೌರಭದ ಸುಖ ನಮ್ಮ ಅನುಭವಕ್ಕೆ ಬರಬೇಕಾದರೆ ನಮ್ಮ ಒಳಗೂ ಒಂದು ಸೌರಭವಿರಬೇಕು.

ಈ ಒಳಗಣ ಸೌರಭವು 'ಸಂಸ್ಕೃತಿ' ಎಂಬುದು ಅರಳಿದ ಅಂತರಂಗವೆಂಬ ಕುಸುಮದ ಕಂಪು. ನಾಸಿಕಕ್ಕೆ ಸೂಸಿ ಬರುವ ಸೌರಭ ಮಧುರವಾಗಿದ್ದರೆ ನಾಸಿಕದ ನೆಲೆಯಾಚೆಗೆ ಇರುವ ಈ ಸೌರಭ ಇನ್ನು ಮಧುರ. ಪ್ರಪಂಚದಲ್ಲಿ ಇಂದಿನ ವರೆಗೆ ಅರಳಿದ ಜೀವನ ಕುಸುಮಗಳು ಸಂಸ್ಕೃತಿಯೆಂಬ ಈ ಸೌರಭವನ್ನು ಮಾನವ ಪ್ರಪಂಚದ ವಾತಾವರಣದಲ್ಲಿ ತೋಡುತ್ತ ಬಂದಿವೆ. ಮಹಾತ್ಮರು, ಮಹಾನುಭಾವರು, ಉದಾರ ಉದಾತ್ತ ಚರಿತರು, ವೀರರು ಧೀರರು- ಯುಗಯುಗಗಳಲ್ಲಿ ಹರಡಿದ ಈ ಸಂಸ್ಕೃತಿ ಸೌರಭವವು ಆ ಆ ಯುಗಗಳಿಗೆ ಮಾತ್ರ ಮರ್ಯಾದಿತವಾಗಿರದೆ ಸರ್ವ ಯುಗಗಳಿಗೂ ಲಭ್ಯವಾಗುತ್ತದೆ; ಯುಗ ಯುಗಗಳಲ್ಲಿ ಅದು ಸಂಗ್ರಹವಾಗುತ್ತ ಹೋಗುತ್ತದೆ. ಆದುದರಿಂದಲೇ ಮಾನವನು ಪ್ರಗತಿ ಪಥದಲ್ಲಿ ಹೆಚ್ಚು ಹೆಚ್ಚು ಮುಂದೆ ಸಾಗುವುದು ಸಾಧ್ಯವಾಗುತ್ತದೆ. ಜೀವನವು ನಿಜವಾಗಿ ಸಂಪದ್ಯುಕ್ತವಾಗುವುದು ಈ ಜೀವನ ಸೌರಭದಿಂದ.

ಕುಸುಮ ಬಿದ್ದು ಹೋಗಬಹುದು; ಆದರೆ ಅದರ ಪರಿಮಳ ಅಳಿದು ಹೋಗಲರಿಯದು; ಅದು ತನ್ನ ಅಸ್ತಿತ್ವವನ್ನು ಇಲ್ಲಿ ತೋರದಿದ್ದರೆ ಬೇರೊಂದು

ಕಡೆಗೆ ಅದು ಬೀರಿಯೇ ಬೀರುವುದು. ಎಲ್ಲಿಯೇ ತೇಲುತ್ತಲಿರಲಿ, ಅದು ವಾತಾವರಣದ ಒಂದು ಅಂಶವಾಗಿ ಉಳಿದೇ ಉಳಿಯುವುದು. ಹಾಗೆಯೇ ಉತ್ತಮ ವ್ಯಕ್ತಿಯ ಜೀವನದಿಂದ ಹೊರಟು ಬಂದ ಸಂಸ್ಕೃತಿಯೆಂಬ ಸೌರಭವು ಆ ವ್ಯಕ್ತಿ ಕಾಣದಂತಾದ ಮೇಲೂ ಉಳಿದು ಮುಂದೆ ಬರುವ ವ್ಯಕ್ತಿಗಳ ಜೀವನದ ಮೇಲೆ ಒಂದು ಸುಖವಾದ ಪರಿಣಾಮವನ್ನುಂಟು ಮಾಡುವುದು.

ಇಲ್ಲಿ ಗಮನಿಸಬೇಕಾದ ಒಂದು ಮಹತ್ವದ ಮಾತು ಉಂಟು. ಸಂಸ್ಕೃತಿ ಎಂಬ ಅಮೋದವನ್ನು ಆಘ್ರಾಣಿಸಲು ಸಿದ್ಧತೆ ಬೇಕು; ಅದಕ್ಕಾಗಿ ನಾವು ನಮ್ಮ ಅಂತರಂಗದ ಘ್ರಾಣೇಂದ್ರಿಯವನ್ನು ತೆರೆದಿಡುವುದು ಅತ್ಯಗತ್ಯ; ಅಲ್ಲದೆ ಸಂಸ್ಕೃತಿಯ ಸೌರಭ ಎಲ್ಲಿ ಎಲ್ಲಿ ಆಡುತ್ತಲಿರುವದೋ ಅಲ್ಲಿ ಅಲ್ಲಿ ನಾವು ವಿಹರಿಸುವುದೂ ಅತ್ಯಗತ್ಯ. ಅದು ಪರಿಸರದಲ್ಲಿರುವ ಒಳ್ಳೆಯ ಜನರ ಜೀವನದಿಂದ ಸೂಸುತ್ತಿರಬದು. ಗ್ರಂಥಗಳಿಂದ ಹೊರಹೊಮ್ಮುತ್ತಿರಬಹುದು. ಕೆಲವೊಂದು ಹಳೆಯ ಸಂಪ್ರದಾಯಗಳಲ್ಲಿ ಆ ಗಂಧ ತುಳುಕುತ್ತಿರಬಹುದು. ನಮ್ಮ ಪೂರ್ವಜರಿಂದ ಪೋಷಿತವಾದ ಕಲೆಯ ಬಳ್ಳಿಗೆ ಬಿಟ್ಟ ಹೂಗಳಿಂದ ಹೊರಡುತ್ತಿರಬಹುದು. ಅದು ನಮ್ಮ ನಾಡಿಗೆ ವಿಶಿಷ್ಟವಾದುದಾಗಿರಬಹುದು; ಅಥವಾ ಹೊರನಾಡಿನಿಂದ ತೀಡಿ ತೀಡಿ ಬರುತ್ತಿರಬಹುದು. ಅದನ್ನು ನಾವು ಸ್ವಾಗತಿಸಿ ಸಂಗ್ರಹಿಸಿದಷ್ಟೂ ಕ್ಷೇಮ. ಅದರಲ್ಲಿ ನಮ್ಮ ಜೀವ ಭಾವ ಗಳನ್ನು ಮೀಯಿಸಿದಷ್ಟು ಒಳಿತು. ಈ ಸಂಬಂಧದಲ್ಲಿ ಸಂಕುಚಿತ ಮನೋ ಭಾವನೆ ಸಲ್ಲದು. ನಮ್ಮ ಸಂಸ್ಕೃತಿಯ ಸೌರಭವೆಂದು ಅಭಿಮಾನ ಪಡ ಬಾರದೆಂತಲ್ಲ; ಆದರೆ ಜೊತೆಗೆ ಇತರ ಸೌರಭವನ್ನು ನಮ್ಮ ಅಂತರಂಗದ ಆರೋಗ್ಯಕ್ಕಾಗಿ ಮತ್ತು ಪೋಷಣೆಗಾಗಿ ಆನಂದದಿಂದ ಬರಮಾಡಿಕೊಳ್ಳುವ ಪ್ರವೃತ್ತಿಯನ್ನು ನಾವು ಬೆಳಸಿಕೊಳ್ಳಬೇಕು. ಮತ ಧರ್ಮಗಳ ವಿಷಯ ದಲ್ಲೂ ಇದೇ ಮಾತನ್ನು ಹೇಳಬೇಕಾಗುತ್ತದೆ. ಭಾರತದ ವಿಷಯದಲ್ಲಂತೂ ಈ ಮಾತನ್ನು ಇನ್ನು ವಿಶೇಷವಾಗಿ ಹೇಳಬೇಕಾಗುತ್ತದೆ. ಏಕೆಂದರೆ ಭಾರ ತವು ಅನೇಕ ಮತ ಧರ್ಮಗಳ ತವರುಮನೆಯಾಗಿದೆ. ಒಂದೊಂದು ಧರ್ಮಕ್ಕೂ ಅವರದೇ ಆದ ಪರಿಮಳ ಇರಬಹುದು. ಇರುತ್ತದೆ; ಆದರೆ

ಭಾರತದ ಸಂಸ್ಕೃತಿಯಲ್ಲಿ ಈ ಎಲ್ಲ ಧರ್ಮಗಳ ಹಾಗು ಪ್ರದರ್ಶನಗಳಲ್ಲ ಸಂಸ್ಕೃತಿ ಸಮಾವೇಶವಾಗಿರುತ್ತದೆ; ಸಮರಸಗೊಂಡಿರುವುದೆಂದರೆ ಇನ್ನೂ ಚೆನ್ನು. ಒಂದು ಧರ್ಮ ಸಂಪಗೆಯ ಕಂಪನ್ನು ಬೀರುತ್ತಿದ್ದರೆ ಇನ್ನೊಂದು ಮಲ್ಲಿಗೆಯ ಪರಿಮಳವನ್ನು ಸೂಸುತ್ತಿರಬಹುದು. ಮತ್ತೊಂದು ಗುಲಾಬಿಯ ಆಮೋದವನ್ನು ಸೂರೆಗೈಯುತ್ತಿರಬಹುದು. ಒಂದು ಹೂದೋಟದಲ್ಲಿ ಹೊಕ್ಕಾಗ ಈ ಎಲ್ಲ ಹೂಗಳ ಸೌರಭವು ಸಮರಸಗೊಂಡು ನಮ್ಮ ನಾಸಿಕಕೆ ತೀಡಿ ಬಂದು ನಮ್ಮನ್ನು ತಣಿಸುತ್ತದೆ. ಅದರಂತೆ ಭಾರತದಲ್ಲಿ ಮೂಡಿ ಬೆಳಗಿದ ಎಲ್ಲ ಪ್ರದರ್ಶನಗಳ ಹಾಗು ಧರ್ಮಗಳ ಸಂಸ್ಕೃತಿಯು ಭಾರತ ಸಂಸ್ಕೃತಿಯು ಸಮಾವೇಶವಾಗಿ ಅದು ಒಂದು ಅಂತ್ಯಂತ ಶ್ರೀಮಂತ ಸಂಸ್ಕೃತಿಯಾಗಿ ನಮ್ಮ ಭಾಗ್ಯ ವಿಶೇಷದಿಂದ ನಮ್ಮ ಪಾಲಿಗೆ ಬಂದಿದೆ. ದ್ರಾವಿಡ ಸಂಸ್ಕೃತಿ ಆರ್ಯ ಸಂಸ್ಕೃತಿಗಳೆರಡೂ ಅದರಲ್ಲಿ ಹಿತವಾಗಿ ಮಿತವಾಗಿ ಬೆರೆತಿವೆ. ವೇದಕಾಲದ ದ್ರಷ್ಟಾರರ ಧರ್ಮ, ಬುದ್ಧದೇವನ ಧರ್ಮ, ಮಹಾವೀರನ ಧರ್ಮ, ಬಸವಣ್ಣನವರ ಧರ್ಮ– ಇವೆಲ್ಲ ಧರ್ಮಗಳ ಸಾಮಾನ್ಯ ಹಾಗು ವಿಶಿಷ್ಟ ಸಂಸ್ಕೃತಿಗಳ ಒಂದು ಸುಂದರ ಸಮನ್ವಯ ಭಾರತ ಧರ್ಮದ ಸಂಸ್ಕೃತಿ. ಈ ಸಂಸ್ಕೃತಿಯನ್ನು ನಮ್ಮ ಜೀವನಾರೋಗ್ಯಕ್ಕೆ ನಾವು ಒಳಸಿಕೊಳ್ಳುವುದಲ್ಲದೆ ನಮ್ಮ ಜೀವನ ರೀತಿಯಿಂದ ಅದನ್ನು ಇನ್ನೂ ಶ್ರೀಮಂತಗೊಳಿಸಿ ಮುಂದಿನ ಜನಾಂಗಗಳಿಗಾಗಿ ಉಳಿಸುವ ಹೊಣೆಯೂ ನಮ್ಮ ಮೇಲಿದೆ.

ಯುಗ ಯುಗಗಳಲ್ಲಿ ಅವತರಿಸಿದ ಧೀರೋದಾತ್ತ ಪುರುಷರೂ ಸ್ತ್ರೀಯರೂ ತಮ್ಮದೇ ಆದ ಪ್ರಭಾವವನ್ನು ಪ್ರಪಂಚದಲ್ಲಿ ಹರಡಿಹೋಗಿದ್ದಾರೆ. ಆ ಮಹಾನುಭಾವರು ಇಂದು ನಮ್ಮ ಕಣ್ಮುಂದೆ ಇಲ್ಲದೆ ಇರಬಹುದು. ಆದರೆ ಅವರ ಉತ್ತಮಿಕೆ ಆ ಆ ಜನಾಂಗಗಳಲ್ಲಿ ತನ್ನ ಸೌರಭವನ್ನು ಸೂಕ್ಷ್ಮವಾಗಿ ಸೂಸುತ್ತಲೇ ಇರುವುದು. ಈ ದೃಷ್ಟಿಯಿಂದ ಆ ಮಹಾ ವ್ಯಕ್ತಿಗಳು ಯಾವಾಗಲೂ ಬದುಕಿದಂತೆಯೇ. ಆತ್ಮ ಅಮರವಾಗಿದೆ ಎಂಬ ತತ್ವ ಬಳಕೆಗೊಂಡಿರುವುದು ಈ ದೃಷ್ಟಿಯಿಂದಲೇ. ಯಾವ ಯಾವ ವ್ಯಕ್ತಿಗಳ ಪ್ರಭಾವವು ಯುಗ ಯುಗಗಳಲ್ಲಿ ಹೀಗೆ ಸೂಕ್ಷ್ಮವಾಗಿ ನೆಲೆಗೊಳ್ಳುವುದೋ

ಆ ಮಹಾನುಭಾವರಿಗೆ ಮರಣವೆಂಬುದೆಲ್ಲಿ ? ಇಂತಹ ವ್ಯಕ್ತಿಗಳ ಜೀವನ ಸೌರಭದ ಸಂಗ್ರಹವೇ ಸಂಸ್ಕೃತಿ ಎಂದು ಹೇಳಲಾಗಿದೆ. ಆ ಸೌರಭವನ್ನು ನಾವು ನಮ್ಮ ಜೀವನದಲ್ಲಿ ಸಂಗ್ರಹಿಸುತ್ತ ಹೋದರೆ ಮಾತ್ರ ಸಂಸ್ಕೃತಿಯನ್ನು ಉಳಿಸಿ ಬೆಳಸುವುದು ಸಾಧ್ಯವಾಗುತ್ತದೆ; ಯಾವುದೇ ಸಂಸ್ಕೃತಿ ಸಜೀವ ಸಂಸ್ಕೃತಿಯಾಗುವುದು ಈ ಬಗೆಯಾಗಿ.

ಗಂಧವತಿ ಪೃಥ್ವಿ ಯುಗ ಯುಗಗಳಲ್ಲಿ ಅದೆಂತೋ ಸೌರಭವನ್ನು ಸಂಗ್ರಹಿಸಿ ಅದನ್ನು ಸಹಸ್ರ ಸಹಸ್ರಕರಗಳಿಂದ ಧಾರಾಳವಾಗಿ ಪ್ರಪಂಚಕ್ಕೆ ನೀಡುತ್ತಿದ್ದಾಳೆ. ಅದೇ ರೀತಿ ನಮ್ಮ ಜೀವನದಲ್ಲಿ ಸಂಸ್ಕೃತಿ ಸೌರಭ ಸಂಗ್ರಹವಾಗಿ ಅದು ಮುಂದು ಮುಂದಿನ ಜನಾಂಗಗಳಿಗೆ ಹರಡಿಹೋಗ ಬೇಕು. ಆ ಒಟ್ಟು ಸೌರಭಕ್ಕೆ ನಮ್ಮದೇ ಆದ ಕಾಣಿಕೆ ಸಲ್ಲುವಂತೆ ನಮ್ಮ ಇಂದಿನ ಜೀವನ ನಡೆಯಬೇಕು. ಇಂದಿನ ಜೀವನ ನಮ್ಮದು. ಅದರಲ್ಲಿ ಸೌರಭ ತುಂಬುವಂತೆ ನಾವು ನೋಡಿಕೊಂಡರೆ ಮುಂದೆ ಬರಲಿರುವವರ ಜೀವನದಲ್ಲಿ ಅದು ತುಳುಕುವುದರಲ್ಲಿ ಸಂದೇಹವಿಲ್ಲ.



# ಸ್ಫೂರ್ತಿಯ ಮೂರ್ತಿ

..ಾರಿ ಪರರುಪಕಾರಿ ನಾರಿ ಸ್ವರ್ಗಕೆ ದಾರಿ
ನಾರಿ ಸಕಲರಿಗೆ ಹಿತಕಾರಿ.....
... ... ... ... ... ... ... ...

—ಸರ್ವಜ್ಞ

ಎಂದು ಸರ್ವಜ್ಞನು ಸ್ತ್ರೀಗೆ ಸಲ್ಲಿಸಬೇಕಾದ ಗೌರವವನ್ನೇ ಸಲ್ಲಿಸಿದ್ದಾನೆ. ಸ್ತ್ರೀ ಕಾರ್ಯರಂಗದಲ್ಲಿ ಅಷ್ಟು ಕಾಣಿಸಿಕೊಳ್ಳದಿದ್ದರೂ ಯುಗ ಯುಗಗಳಲ್ಲಿ ಅತಿ ಸೂಕ್ಷ್ಮವಾಗಿ ಆದರೆ ಅತ್ಯಂತ ಪರಿಣಾಮಕಾರಕವಾಗಿ ಜೀವನದ ಉತ್ತಮಿಕೆಗೆ ತಕ್ಕ ಪ್ರೇರಣೆಯನ್ನು ಒದಗಿಸುತ್ತ ಬಂದಿದ್ದಾಳೆ. ಎಲೆಯ ಮರೆಯ ಹೂವಿನಂತೆ ಅವಳ ಬಾಳು.

ಜೀವನವನ್ನು ಉನ್ನತಗೊಳಿಸುವ ಅಂಶಗಳು ಮುಖ್ಯವಾಗಿ ಎರಡು ಎಂದು ಕಾಣುತ್ತದೆ. ಒಂದು ಒಳ್ಳೆಯ ಸ್ಫೂರ್ತಿ; ಇನ್ನೊಂದು ಉತ್ಸಾಹ ಮಯವಾದ ಪ್ರಯತ್ನ. ಪ್ರಯತ್ನಕ್ಕೆ ಸ್ಫೂರ್ತಿಯೇ ಚಾಲನೆಯನ್ನು ಕೊಡುವುದರಿಂದ ಅದರ ಸ್ಥಾನವು ಪ್ರಯತ್ನದ ಸ್ಥಾನಕ್ಕಿಂತ ಒಂದು ದೃಷ್ಟಿಯಿಂದ ಹಿರಿದು. ಸಾಹಿತ್ಯಕ್ಷೇತ್ರದಲ್ಲಿ ಸ್ಫೂರ್ತಿಯ ಸ್ಥಾನ ಉನ್ನತವಾದುದೆಂದು ಬೇರೆ ಹೇಳಬೇಕಿಲ್ಲ. ಸ್ಫೂರ್ತಿಯಿಂದಲ್ಲದೆ ಶಿಲ್ಪ ಒಪ್ಪವಡೆಯದು. ಚಿತ್ರಕಲಾ ಸೃಷ್ಟಿಗೂ ಸ್ಫೂರ್ತಿ ಬೇಕು. ಜೀವನ ಕಲೆಗಂತೂ ಸ್ಫೂರ್ತಿಯೇ ನೆಲೆ; ಸ್ಫೂರ್ತಿಯೇ ಸೆಲೆ.

ವಿದ್ಯುಚ್ಛಕ್ತಿಸಂತಿರುತ್ತದೆ ಸ್ಫೂರ್ತಿಯ ಕಾರ್ಯ. ಮಹಾಪುರುಷರು ಪಡೆದ ಸ್ಫೂರ್ತಿ ಅವರ ಮಟ್ಟಿಗಷ್ಟೇ ಉಳಿಯದೆ ನಾಡಿನಲ್ಲೆಲ್ಲ ಹರಡುತ್ತದೆ. ಮಹಾ

ವ್ಯಕ್ತಿಯೊಬ್ಬನು ಸ್ಫೂರ್ತಿ ಒದಗಿಸಿದ ಚಾಲನೆಯಿಂದಾಗಿ ಹಿರಿಯ ಗುರಿಯತ್ತ ಸಾಗಿದಾಗ ಅವನಲ್ಲಿ ದೀಪ್ತವಾದ ಭಾವದ ಸೋಂಕಿನಿಂದ ಇಡಿಯ ಜನಾಂಗದ ಭಾವವೇ ದೀಪ್ತವಾಗುತ್ತದೆ. ಆದುದರಿಂದ ಆ ಮಹಾವ್ಯಕ್ತಿಯ ಯುಗದ ಜೀವನಕ್ಕೆ ಒಂದು ವಿನೂತನ ಕ್ರಾಂತಿ ಪ್ರಾಪ್ತಗುತ್ತದೆ.

ಇತಿಹಾಸ ಪ್ರಸಿದ್ಧ ವ್ಯಕ್ತಿಗಳ ವೈಯಕ್ತಿಕ ಜೀವನವನ್ನು ಪರಿಶೀಲಿಸಿದರೆ ಕಂಡೂ ಕಾಣದಂತೆ ಅವರವರ ಭಾವಕ್ಕೆ ಜ್ಯೋತಿಯನ್ನು ಮುಟ್ಟಿಸಿದ ಶ್ರೇಯಸ್ಸು ಪ್ರಾಯಶಃ ಸ್ತ್ರೀಯರಿಗೆ ಸಲ್ಲುವದೆಂಬ ಮಾತು ಸಿದ್ಧವಾಗುತ್ತದೆ. ಮಹಾವ್ಯಕ್ತಿಗಳ ಮಾತಂತಿರಲಿ; ತಾನು ತೆರೆಯ ಹಿಂದೆ ನಿಂತು, ಸಾಮಾನ್ಯ ಜೀವನವನ್ನೂ ಸ್ತ್ರೀ ಬೆಳಗಬಲ್ಲಳೆಂಬುದು ನಮ್ಮಲ್ಲಿ ಅನೇಕರ ಅನುಭವಕ್ಕೆ ಬಂದ ಮಾತೇ ಸರಿ. 'ಮುನಿದರೆ ನಾರಿಯೇ ಮಾರಿ' ಎಂಬ ಮಾತಿನಲ್ಲಿ ಸತ್ಯವಿಲ್ಲವೆಂದಲ್ಲ.ಆದರೆ 'ನಾರಿ ಸ್ವರ್ಗಕ್ಕೆ ದಾರಿ' ಎಂಬುದನ್ನು ಮರೆಯಲಾಗದು. 'ಹೆಣ್ಣು ಹೆಣ್ಣಲ್ಲ; ಹೆಣ್ಣು ರಕ್ಕಸಿಯಲ್ಲ ಹೆಣ್ಣು ಪ್ರತ್ಯಕ್ಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂಬ ವಚನ ಇದೇ ಸತ್ಯವನ್ನು ವ್ಯಕ್ತಮಾಡುತ್ತದೆ.

ಪುರುಷ ಪ್ರಯತ್ನದ ಪ್ರತೀಕ; ಸ್ತ್ರೀ ಸ್ಫೂರ್ತಿಯ ಮೂರ್ತಿ. ತಾಯಿಯಾಗಿ, ತಂಗಿಯಾಗಿ, ಮಗಳಾಗಿ, ಮಡದಿಯಾಗಿ, ಸ್ತ್ರೀ ಮಹಾನುಭಾವರ ಮಹಾಕಾರ್ಯಕ್ಕೆ ಸ್ಫೂರ್ತಿಯನ್ನು ನೀಡುತ್ತಾ ಬಂದಿದ್ದಾಳೆ; ಶಿವಾಜಿ, ಮಹಾತ್ಮಾಗಾಂಧಿ ಮೊದಲಾದ ಮಹಾ ಪುರುಷರ ಮಹಾಕಾರ್ಯಗಳ ಹಿಂದಿನ ಬೆಳಕು ಮಹಾ ಸ್ತ್ರೀಯರಿಂದ ಹೊಮ್ಮಿದ ಬೆಳಕೆಂಬುದನ್ನು ಅವರ ಜೀವನದ ಹಿನ್ನೆಲೆಯನ್ನು ಬಲ್ಲವರೆಲ್ಲರೂ ಬಲ್ಲರು.

ಬುದ್ಧದೇವನ ಜೀವನಕ್ಕೆ ಈ ಸ್ಫೂರ್ತಿ ದೊರೆಯಲಿಲ್ಲವೆಂದು ಮೇಲುನೋಟಕ್ಕೆ ತೋರಬಹುದು. ಸಿದ್ಧಾರ್ಥನು ಬುದ್ಧದೇವನಾಗಲಿಕ್ಕೆ ಕೂಡ ಸ್ತ್ರೀ ನೀಡಿದ ಸೌಹಾರ್ದವೇ ಕಾರಣವಾಗಿರಲು ಸಾಕು. ದುಃಖಿಗಳ ದುಃಖವನ್ನು ನಿವಾರಿಸುವ ನಿಜದ ನೆಲೆಯನ್ನರಿಯಲು ಆ ಇರುಳು ಆತ ಮನೆ ಬಿಟ್ಟು ನಡೆದಾಗ ನಿದ್ರೆಯಲ್ಲಿದ್ದ ಧರ್ಮಪತ್ನಿಯನ್ನೂ ಮಗುವನ್ನೂ ಆತ ಕಣ್ಣುತಪ್ಪಿಸಿ ತೊರೆದು ಹೋದನೆಂಬ ಕಥೆ ಹೇಗೋ ಇಳಿದುಬಂದಿದೆ. ರಾತ್ರಿಯಲ್ಲೇನೋ

ಅವನು ಮನೆ ಬಿಟ್ಟು ಹೊರಟಿರಬಹುದು. ಆದರೆ ಸಿದ್ಧಾರ್ಥನಂತಹ ಧೀರ ತನ್ನ ಕಾರ್ಯಸಾಧನೆಗೆ ಆತಂಕವುಂಟಾಗಬಹುದೆಂಬ ಭಯದಿಂದ ಸತಿ ನಿದ್ರಿಸಿದಾಗ ವಂಚಿಸಿ ಹೋದನೆಂಬ ಮಾತನ್ನು ನಂಬುವುದು ಕಷ್ಟ. ಸಕಲ ಜೀವರಾಸಿಗಳಿಗೆ ಲೇಸನು ಬಯಸಿ ನಡೆದ ಸಿದ್ಧಾರ್ಥನು ಸತಿಗೆ ಹೇಳದೆ ಅಗಲಿ ಅವಳ ಮನಸ್ಸಿಗೆ ನೋವನುಂಟುಮಾಡಲು ಮನದಂದಿರಬಹುವೇ ? ಸತಿ ಯಶೋಧರೆಯು ಪತಿಯ ಘನವಾದ ಉದ್ದೇಶಕ್ಕೆ ಅನುಕೂಲಳಾಗದಷ್ಟು ಅಜ್ಞಳಾಗಿದ್ದಳೆಂದು ನಂಬುವುದು ತಪ್ಪಾದೀತು. ಯಶೋಧರೆಯು ತನ್ನ ಅಪ್ರತಿಮ ಪುರುಷನ ಯಶಕ್ಕೆ ಆಧಾರವಾಗುವಂತೆ ವರ್ತಿಸಿರಬಹುದೆಂದು ತಿಳಿಯುವುದೇ ಸಾಧು. ಯಶೋಧರೆಯು ಸಿದ್ಧಾರ್ಥನ 'ಯಶೋಧರೆ'ಯೇ ಆಗಿರಬೇಕು. ಸಿದ್ಧಾರ್ಥನು ಬುದ್ಧನಾಗಿ ಉಪದೇಶ ಮಾಡುತ್ತ ಮಾಡುತ್ತ ಮರಳಿ ಕಪಿಲವಸ್ತುವಿಗೆ ಬಂದಾಗ ಬುದ್ಧ ದೀಕ್ಷೆಯನ್ನು ಹೊಂದಲು ಹಾರೈಸಿ ದೀಕ್ಷೆಕೊಡುವಂತೆ ಪತಿಯನ್ನು ಒಲಿಸಿದ ಸತಿ, ಸಿದ್ಧಾರ್ಥನು ಬೆಳಕಿಗಾಗಿ ಅಲೆಯುತ್ತಿರುವಾಗ ಅವನ ಉದ್ದೇಶ ಸಿದ್ಧಿಗಾಗಿ ಅಷ್ಟು ವರುಷವೂ ತಪ ನಿಂತಿರಲಾರಳೇ ? ಅದೇನೇ ಇರಲಿ. ಯಶೋಧರೆಯ ಅಂತರಂಗದ ಪ್ರಾರ್ಥನೆ ಬುದ್ಧದೇವನಿಗೆ ಸೂಕ್ಷ್ಮವಾದ ಪ್ರೇರಣೆಯಾಗಿ ಪರಿಣಮಿಸಿರಬೇಕು.

ಸ್ತ್ರೀ ಸ್ಫೂರ್ತಿಯ ಮೂರ್ತಿ ಎಂಬುದಕ್ಕೆ ಕನ್ನಡ ನಾಡಿನಲ್ಲಿ ಉದಾಹರಣೆಗಳು ಕಡಿಮೆ ಇಲ್ಲ. ಬಸವಣ್ಣನವರ ಸಹಧರ್ಮಿಣಿ ನೀಲಾಂಬಿಕೆ ಬಸವಣ್ಣನವರು ಕೈಕೊಂಡ ಉದಾತ್ತವಾದ ಕಾರ್ಯಕ್ಕೆ ತಕ್ಕಮಟ್ಟಿಗೆಯಾದರೂ ಪ್ರೇರಣೆಯನ್ನು ನೀಡಿರಬೇಕೆಂಬುದೂ ಅವರು ತಮ್ಮ ಬಾಳಿನಲ್ಲಿ ನಿಜದ ನಿಲವನ್ನು ಅಳವಡಿಸಿಕೊಂಡಿರಬೇಕೆಂಬುದೂ ಅವರ ಲಿಂಗೈಕ್ಯದ ಸಂದರ್ಭದಿಂದ ಸಹಜವಾಗಿ ತಿಳಿಯುವಂತಿದೆ. ಬಸವಣ್ಣನವರು ಲಿಂಗೈಕ್ಯರಾಗುವ ಉದ್ದೇಶದಿಂದ ಕೂಡಲಸಂಗಮಕ್ಕೆ ಹೋಗಿ ನಿಲಾಂಬಿಕೆಯವರನ್ನು ಅಲ್ಲಿಗೆ ಕರೆತರಲು ಅಪ್ಪಣ್ಣಗಳನ್ನು ಕಳುಹಿದಾಗ ಸುಜ್ಞಳಾದ ಆ ಸಾಧ್ವೀಮಣಿಯಿತ್ತ ಉತ್ತರವು ಅಮೋಘವಾದ ಆತ್ಮತತ್ವವನ್ನೊಳಗೊಂಡಿದೆ. ಹೀಗಿದೆ ಆ ಉತ್ತರ:

ನಾನಾರ ಸಾರಲೆಂದು ಚಿಂತಿಸಲೇಕಯ್ಯಾ ?
ನಾನಾರ ಸಾರಲೆಂದು ಭ್ರಮೆ ಪಡಲೇಕಯ್ಯಾ ?
ನಾನಾರ ಇರವನರಿಯಲೆಂದು ಪ್ರಳಾಪಿಸಲೇಕಯ್ಯಾ ?
ಪರಿಣಾಮ ಮೂರ್ತಿ ಬಸವನ ರೂಪ
ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇಕಯ್ಯಾ?

ಬಸವಣ್ಣನವರೂ ತಲೆಬಾಗಿರಬೇಕು ಈ ಉತ್ತರಕ್ಕೆ !

ಶ್ರೇಷ್ಠವಾದ ಕಾವ್ಯವನ್ನು ರಚಿಸಬೇಕೆಂಬ ಹಂಬಲಯನ್ನು ಈಡೇರಿಸಿಕೊಳ್ಳಲಾಗದೆ ತರುಣ ಕವಿ ರನ್ನ ತನ್ನ ಮನಸೆಬಿಟ್ಟು ಅಲೆದಾಡುತ್ತಿರುವಾಗ ದಾನಚಿಂತಾಮಣಿಯಾದ ಅತ್ತಿಮಬ್ಬೆಯ ಔದಾರ್ಯದಿಂದ ಸ್ಫೂರ್ತಿಗೊಂಡು ಮೊದಲು ಅಜಿತ ತೀರ್ಥಕರ ಪುರಾಣವನ್ನೂ ಬಳಿಕ ಗದಾಯುದ್ಧವನ್ನೂ ರಚಿಸಿದ ಸಂಗತಿಯು ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಸುವರ್ಣರೇಷೆಯಿಂದ ರೇಖಿಸಲ್ಪಟ್ಟಿದೆ.

ತಮ್ಮ ಅನುಪಮವಾದ ಜೀವನಕ್ಕೆ ಸ್ಫೂರ್ತಿಯನ್ನು ಪೂರೈಸಿದ ಮಾತೆಯನ್ನೂ ತಮ್ಮ ಅಸಿಧಾರಾವ್ರತಕ್ಕೆ ಅನುಕೂಲಳಾಗಿ ನಡೆದ ಮಡದಿಯನ್ನೂ ಮನವಾರೆ ಕೊಂಡಾಡಿಡ ಮಹಾತ್ಮಾ ಗಾಂಧಿಯವರು ಸ್ತ್ರೀಯರ ಸತ್ವಭಾವವನ್ನರಿತೇ ಸತ್ಯಾಗ್ರಹದ ವಿಜಯಕ್ಕಾಗಿ ಸ್ತ್ರೀ ಸತ್ಯಾಗ್ರಹಿಗಳನ್ನು ಮುಂದೆ ಮಾಡಿದ ನೆನಪು ನಮ್ಮ ಮನದಲ್ಲಿ ಹೊಚ್ಚ ಹೊಸತಾಗಿಯೇ ಉಳಿದಿದೆ.

ವಾಸ್ತು ಶಿಲ್ಪಕಲಾ ನಿರ್ಮಾಣವನ್ನು ಕುರಿತು ಉದಾಹರಣೆ ಬೇಕಿದ್ದರೆ ಶಹಾಜಹಾನನ ಹೃದಯದಲ್ಲಿ ಮಮತಾಜಳು ಎಬ್ಬಿಸಿದ ಭಾವತರಂಗವು ಅದೋ ಅಮೃತದಲೆಯಲ್ಲಿ ತುಂಬಿ ನಿಂತಿದೆ ತಾಜಮಹಲವಾಗಿ.

ಜೀವನದ ಮಹಲನ್ನು ಕಟ್ಟಲೆಳೆಸುವವರು ಸ್ವಾಗತಿಸಬೇಕು ಈ ಸ್ಫೂರ್ತಿಯ ಮೂರ್ತಿಯನ್ನು.

---

# ಮೂರು ದೃಷ್ಟಿ

ಅವಸಾನ ಕಾಲ ಬಂದಾಗ ಘಜನಿ ಮಹಮೂದನು ತಾನು ಸುಲಿಗೆ ಮಾಡಿ ಸಂಪಾದಿಸಿದ ದ್ರವ್ಯವನ್ನೆಲ್ಲ ತನ್ನ ಕಣ್ಣಮುಂದೆ ರಾಸಿ ಹಾಕಿಸಿ "ಇಷ್ಟೆಲ್ಲ ದ್ರವ್ಯ ಬಿಟ್ಟು ಹೇಗೆ ಸಾಯಲಿ ?" ಎಂದನಂತೆ. ಗಯಟೆ ಕವಿ ಮರಣ ಸಮೀಪಿಸಿದಾಗ—"ಬೆಳಕು ಬರಲಿ; ಇನ್ನಿಷ್ಟು ಬೆಳಕು ಬರಲಿ" ಎಂದನಂತೆ. ಘಜನಿ ಮಹಮೂದನ ದೃಷ್ಟಿಗೂ ಗಯಟೆ ಕವಿಯ ದೃಷ್ಟಿಗೂ ಎಷ್ಟು ಅಂತರ! ಒಂದು ಪ್ರಯೋಜನ ದೃಷ್ಟಿಯಲ್ಲಿ ಅತ್ಯಂತ ಕನಿಷ್ಟ ದೃಷ್ಟಿ; ಇನ್ನೊಂದು ಆತ್ಮ ದೃಷ್ಟಿ. "ಶರಣರ ಮನವನ್ನು ಮರಣದಲ್ಲಿ ನೋಡು" ಎಂಬ ಉಕ್ತಿ ಕನ್ನಡದಲ್ಲಿ ಉಂಟು. ಶರಣರ ಜೀವನ ದೃಷ್ಟಿಯನ್ನು ಅವರ ಅವಸಾನ ಕಾಲವು ಎತ್ತಿ ತೋರುವುದೆಂಬ ರಹಸ್ಯವು ಈ ಮಾತಿನಲ್ಲಿ ಅಡಗಿದೆ.

ಜೀವನ ದೃಷ್ಟಿಗಳನ್ನೆಲ್ಲ ಪರಿಶೀಲಿಸಿದರೆ ಅವುಗಳನ್ನೆಲ್ಲ ಸಾಮಾನ್ಯವಾಗಿ ಮೂರು ವರ್ಗಗಳಾಗಿ ವಿಂಗಡಿಸಬಹುದೆಂದು ತೋರುತ್ತದೆ. ಒಂದು ಪ್ರಯೋಜನ ದೃಷ್ಟಿ; ಇನ್ನೊಂದು ಸೌಂದರ್ಯ ದೃಷ್ಟಿ; ಮೂರನೆಯದು ಆಧ್ಯಾತ್ಮ ದೃಷ್ಟಿ. ಮೂರೂ ಒಂದಕ್ಕೊಂದು ವಿರೋಧವನ್ನು ತಳೆದಿರಲೇ ಬೇಕೆಂದು ತಿಳಿಯಕೂಡದು; ಅವು ವಿವಿಧ ಪ್ರಮಾಣದಲ್ಲಿ ಒಟ್ಟಿಗೆ ಇರ ಬಹುದು. ಅವು ಸೇರಿದ ಪ್ರಮಾಣದ ಮೇಲಿಂದ ಅವುಗಳ ಬಗೆಯನ್ನು ನಿರ್ಧರಿಸಬಹುದು. ಈ ಮೂರು ದೃಷ್ಟಿಗಳು ಹಿತಮಿತವಾಗಿ ಹೊಂದಿ ಕೊಂಡೂ ಇರಬಹುದು. ಹಾಗೆ ಹೊಂದಿಕೊಂಡಿರುವುದೇ ಲೇಸು. ಏಕೆಂದರೆ

ಪ್ರಯೋಜನ ದೃಷ್ಟಿಯು ಪ್ರಪಂಚದಿಂದ ಮಾಯವಾದರೆ ಮಾನವ ಪ್ರಪಂಚವೇ ಮಾಯವಾದೀತು.

ಆದರೆ ಪ್ರಯೋಜನ ದೃಷ್ಟಿ ತಾನೇ ತಾನಾಗಿ ತಾಂಡವವಾಡಿದರೆ ಪ್ರಪಂಚವು ರಸವಿಹೀನವಾಗಿ ಜೀವನವೊಂದು ಯಂತ್ರವಾಗಿ ಪರಿಣಮಿಸ ಬಹುದು. ಜೀವನವು ರಸಮಯವಾಗುವುದು ಸೌಂದರ್ಯದ ಸಂಪರ್ಕ ದಿಂದ. ಪ್ರಯೋಜನ ದೃಷ್ಟಿಯು ಸಾಧನ ಸಾಮಗ್ರಿಗಳನ್ನು ಹೆಚ್ಚಿಸಿಕೊಂಡು ಜೀವನವನ್ನು ಸುಸೂತ್ರಗೊಳಿಸಿಕೊಳ್ಳಬಹುದು. ಆದರೆ ಜೀವನದಲ್ಲಿ ಆನಂದದ ಅನುಭವವುಂಟಾಗುವುದು ಸೌಂದರ್ಯ ದೃಷ್ಟಿಯಿದ್ದರೆ ಮಾತ್ರ. ಆಧ್ಯಾತ್ಮ ದೃಷ್ಟಿಯ ಸ್ಥಾನ ಇನ್ನೂ ಮೇಲಿನದು. ಅದು ಆನಂದಾನುಭೂತಿ ಯನ್ನು ಉಂಟು ಮಾಡುವುದಲ್ಲದೆ ಜೀವನವನ್ನು ಉನ್ನತಗೊಳಿಸುವುದು.

ಆಧ್ಯಾತ್ಮವೆಂದರೆ ಜೀವನವನ್ನು ಬಿಟ್ಟು ಯಾವುದೋ ಒಂದು ನಿರಾಕಾರ ವನ್ನು ಬೆನ್ನು ಹತ್ತುವ ಪ್ರವೃತ್ತಿಯೆಂಬ ಅರ್ಥವನ್ನೂ ಇಲ್ಲಿ ಮಾಡಿಕೊಳ್ಳ ಲಾಗದು. ಇಹದ ಜೀವನದಲ್ಲಿ ಪರಮ ಅರ್ಥವನ್ನು ಕಂಡು ತನಗೂ ಪರರಿಗೂ ಸುಖವಾಗುವಂತೆ ನಡೆದು, ಜೀವನ ಸೌಂದರ್ಯವನ್ನು ಪಡೆದು ತನ್ಮೂಲಕ ಜೀವನಾನಂದದ ಉಗಮವಾದೊಡನೆ ಸಾಮರಸ್ಯವನ್ನು ಸಾಧಿಸು ವುದೇ ಬಹುಶಃ ಅಧ್ಯಾತ್ಮದ ಗುರಿಯೆಂದು ಕಾಣುತ್ತದೆ. ನಮ್ಮಂತಹ ಸಾಮಾನ್ಯರೆಲ್ಲರಿಗೆ ಅದು ಸಾಧ್ಯವಾಗಲಿಕ್ಕಿಲ್ಲ; ಆದರೂ ಚಿಂತೆಯಿಲ್ಲ; ಪರಿಶುದ್ಧವಾದ ಸೌಂದರ್ಯ ದೃಷ್ಟಿಯನ್ನು ಬೆಳಸಿಕೊಂಡರೆ ಪ್ರಪಂಚದಲ್ಲಿ ನಿಂತು ಪರಮಾರ್ಥವನ್ನು ದೂರದಿಂದಲಾದರೂ ದೃಷ್ಟಿಸಬಹುದು.

ಕಲಾವಿದರಲ್ಲಿ ಸೌಂದರ್ಯದೃಷ್ಟಿ ಎದ್ದು ತೋರಿದರೆ ಆಶ್ಚರ್ಯವಿಲ್ಲ. ಮಹಾಕವಿಯಾದವನು ಸೌಂದರ್ಯಪಥದಲ್ಲಿ ಬಹುದೂರ ಸಾಗಿ ಆಧ್ಯಾತ್ಮ ದೃಷ್ಟಿಯನ್ನು ಸಮೀಪಿಸಬಹುದು. ಇತ್ತೀಚಿನ ಮಹಾಕವಿಗಳನ್ನೇ ಉದಾ ಹರಿಸುವುದಾದರೆ ಗಯಟೆ, ರವೀಂದ್ರ, ಕಹ್ಲಿಲ ಗಿಬ್ರಾನರನ್ನು ಹೆಸರಿಸ ಬಹುದು. ಕನ್ನಡನಾಡಿನ ಹಿಂದಿನ ಆ ವಾಸ್ತು ಶಿಲ್ಪಕಲಾದಲ್ಲಿ ಸೌಂದರ್ಯ ದೃಷ್ಟಿಯು ಪರಮಾರ್ಥಕ್ಕೆ ತಿರುಗುತ್ತಿದುದು ಕಂಡುಬರುವಂತಿದೆ. ಆಧ್ಯಾತ್ಮದ

ಸುಳಿಗಾಳಿಗೆ ಅವರ ಕಲೆ ಅರಳಿ ಹೂವಾದುದನ್ನು ಹಂಪೆ, ಶ್ರವಣ ಬೆಳ್ಗೊಳ, ಬೇಲೂರು, ಸೋಮನಾಥಪುರಗಳಲ್ಲಿ ಇಂದಿಗೂ ನಿಂತಿರುವ ವಾಸ್ತುಶಿಲ್ಪದಲ್ಲಿ ಹಾಗು ಮೂರ್ತಿಶಿಲ್ಪದಲ್ಲಿ ಕಾಣಬಹುದು.

ಆದುದರಿಂದಲೇ ಕವಿ ಪುಟ್ಟಪ್ಪನವರು ಸೋಮನಾಥಪುರದ ದೇವಾಲಯವನ್ನು ಕುರಿತು:—

" ಶಿಲೆಯುಲ್ಲವೀ ಗುಡಿಯು ಕಲೆಯು ಬಲೆಯು
ಭಗವಂತನಾನಂದ ರೂಪುಗೊಂಡಿಪುದಿಲ್ಲಿ
ರಸಿಕತೆಯು ಕಡಲುಕ್ಕಿ ಹರಿವುದಿಲ್ಲಿ "

ಎಂದು ಹಾಡಿದ್ದಾರೆ.

ತಾನಸೇನನ ಬಗೆಗೆ ಇಳಿದು ಬಂದ ಐತಿಹ್ಯವೊಂದು ಪ್ರಯೋಜನ ದೃಷ್ಟಿ, ಸೌಂದರ್ಯ ದೃಷ್ಟಿ, ಆಧ್ಯಾತ್ಮ ದೃಷ್ಟಿಗಳ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲುವಂತಹದಿದೆ. ಅಕಬರನ ಆಸ್ಥಾನ ಗಾಯಕನಾಗುವ ಮೊದಲು ತಾನಸೇನನಲ್ಲಿ ಬೆಳೆದು ಬಂದ ದೃಷ್ಟಿ ಪ್ರಾಮುಖ್ಯವಾಗಿ ಸೌಂದರ್ಯ ದೃಷ್ಟಿ. ಅವನು ಅಕಬರನ ವಶವಾದನಂತರ ಆ ಸೌಂದರ್ಯ ದೃಷ್ಟಿಯು ಪ್ರಯೋಜನ ದೃಷ್ಟಿಯ ಪ್ರಭಾವಕ್ಕೊಳಗಾಯಿತೆಂದು ತೋರುತ್ತದೆ.

ತಾನಸೇನನ ಸಂಗೀತಕ್ಕೆ ಮಾರುಹೋದ ಅಕಬರನು ತಾನಸೇನನ ಗುರುವಿನ ಗಾನಕಲೆ ಎಂಥದಿರಬೇಕೆಂಬುದನ್ನು ಅರಿಯಲು ಕುತೂಹಲಿಯಾದುದರಿಂದ ತಾನಸೇನನು ತನ್ನ ಗುರುವಿನ ಗಾನ ಪರಿಚಯಮಾಡಿ ಕೊಡಲು ದೊರೆಗೆ ಭರವಸೆಯನ್ನು ಕೊಡುತ್ತಾನೆ. ಸಮಯ ಬಂದಾಗ ಅವನು ಅಕಬರನನ್ನು ಸಂಗೀತದ ಮೂಲಕ ಅಧ್ಯಾತ್ಮ ಸಾಧನೆಯನ್ನು ಮಾಡುತ್ತಿದ್ದ ತನ್ನ ಗುರುವಿನೆಡೆಗೆ ಕರೆದುಕೊಂಡು ಹೋಗುತ್ತಾನೆ.

ಆಗ ದೂರದಿಂದಲೇ ಪ್ರಶಾಂತವಾದ ಅರಣ್ಯದಲ್ಲಿ ಹೊಮ್ಮಿ ಬರುತ್ತಿದ್ದ ಸಂಗೀತವನ್ನು ಕೇಳಿ ನಿಬ್ಬೆರಗಾಗಿ "ತಾನಸೇನ್ ನಿನ್ನ ಸಂಗೀತಕ್ಕೂ ನಿನ್ನ

ಗುರುವಿನ ಈ ಸಂಗೀತಕ್ಕೂ ಎಷ್ಟು ಅಂತರ !" ಎಂದು ಉದ್ಗಾರ ತೆಗೆಯು ತ್ತಾನೆ. ಆಗ ತಾನಸೇನ್ ಹೇಳಿದ ಮಾತಿದು: "ಪ್ರಭೂ, ನಾನು ಹಾಡುವುದು ನನ್ನ ದೊರೆಯಾದ ನಿಮಗಾಗಿ; ನನ್ನ ಗುರು ಹಾಡುವುದು ತನ್ನ ದೊರೆಯಾದ ಪರಮಾತ್ಮನಿಗಾಗಿ" ತಾನಸೇನನ ಗುರುವಿನ ಸೌಂದರ್ಯದೃಷ್ಟಿ ಆಧ್ಯಾತ್ಮ ದೃಷ್ಟಿಯಾಗಿ ಪರಿಣಮಿಸಿತ್ತೆಂಬುದನ್ನು ಈ ಐತಿಹ್ಯ ಎತ್ತಿ ತೋರು ವುದಿಲ್ಲವೇ ?

ಅಧ್ಯಾತ್ಮ ದೃಷ್ಟಿಯನ್ನು ಎಲ್ಲರೂ ಇಟ್ಟುಕೊಳ್ಳಬೇಕೆಂದು ನಾನು ಅಭಿಪ್ರಾಯಪಡುವುದಿಲ್ಲ; ಜನಕ್ಕೆಲ್ಲ ಪ್ರಯೋಜನ ದೃಷ್ಟಿಯಿರಲಿ; ಜೊತೆಗೆ ಸೌಂದರ್ಯ ದೃಷ್ಟಿಯೂ ಬೆಳೆದುಬರಬೇಕೆಂಬುದೇ ಇಲ್ಲಿ ಹೇಳಬೇಕಾದ ಮುಖ್ಯ ಮಾತು. ಇಂದು ನಮ್ಮ ಜನತೆಗೆ ಸರಿಯಾದ ದೃಷ್ಟಿಯುಂಟಾಗ ಬೇಕಾಗಿದೆ. ನಮ್ಮ ದೇಶ ಒಂದು ಪರಿಸ್ಥಿತಿಯಿಂದ ಇನ್ನೊಂದು ಪರಿಸ್ಥಿತಿಗೆ ಬಂದಿದೆಯೇನೋ ನಿಜ. ಆದರೆ ಬರಿಯ ಹೊರಗಣ ಬದಲಾವಣೆಯಿಂದ ನಮ್ಮ ನಾಡಿನ ನಿಜವಾದ ಏಳಿಗೆಯಾಗದು. ಹಿಂದಿನ ಬಾಳು ಇಂದಿನಷ್ಟು ಬರಿದಾಗಿರಲಿಲ್ಲ. ಅಗ ಜೀವನದಲ್ಲಿ ಸ್ಫೂರ್ತಿ ಆಡುತ್ತಲಿದ್ದಿತು. ಬಿಡುಗಡೆ ಬಂದಕೂಡಲೇ ಉದ್ದೇಶ ಸಫಲವಾಯಿತೆಂದು ಅನಿಸಿದರೂ ಜೀವನವನ್ನು ಸಜೀವವಾಗಿ ಇಡುವ ಪ್ರಚೋದನೆ ಒಮ್ಮೆಲೇ ಮಾಯವಾದಂತಾಯಿತು. ಜನತೆಗೆ ಸರಿಯಾದ ದೃಷ್ಟಿಯುಂಟಾಗಿದ್ದರೆ ಜೀವನವು ಇಂದು ಇಷ್ಟೊಂದು ಬರಿದು ಬರಿದಾಗುತ್ತಿರಲಿಲ್ಲ.

ಜನರ ದೃಷ್ಟಿಯಲ್ಲಿ ಸೌಂದರ್ಯವು ಮಾಯವಾದಂತಾಗಿದೆ. ನಾನು ಇಲ್ಲಿ ಹೇಳುತ್ತಿರುವುದು ಬರಿಯ ಬಾಹ್ಯ ಸೌಂದರ್ಯವಲ್ಲ. ಬಾಹ್ಯಾಡಂಬರ ವಲ್ಲ. ಆಡಂಬರವು ಇಂದು ಮೊದಲಿಗಿಂತ ಅದೆಷ್ಟೋ ಪಾಲು ಹೆಚ್ಚಿದೆ ಯೆನೋ ನಿಜ. ಆದರೆ ನಿಜವಾದ ಜೀವನಸೌಂದರ್ಯ ದೃಷ್ಟಿ ಎಲ್ಲಿದೆ ? ಪರರ ಆನಂದದಲ್ಲಿ ಆನಂದ ಹೊಂದುವ ಅಂತರಂಗದ ಸೌಂದರ್ಯ ಇಂದೆಷ್ಟು ಉಳಿದಿದೆ ? ತನಗೆ ದೊರೆತುದನ್ನು ಇತರರೊಡನೆ ಸವಿಯುವ ಭಾವ ಸೌಂದರ್ಯ ಈಗೆಲ್ಲಿದೆ ? ನಯ ವಿನಯಗಳ, ಭಕ್ತಿ ವಿಶ್ವಾಸಗಳ, ಸ್ನೇಹ ಸೌಂದರ್ಯಗಳ ಬೆಲೆ ಈಗೆಷ್ಟು ತಗ್ಗಿ ಹೋಗಿದೆ !

ಜೀವನಸ್ವಾರಸ್ಯ ಕಡಿಮೆಯಾಗಿವೆ ಎಂಬುದಕ್ಕೆ ಇನ್ನು ಹೆಚ್ಚಿನ ನಿದರ್ಶನ ವೇನು ಬೇಕು ?—ಬರಿಯ ಹೊರಗಿನ ಸೌಕರ್ಯ ಸಲಕರಣೆಗಳ ಸಂಗ್ರಹ ದಿಂದ ಜೀವನದ ನಿಜವಾದ ಸ್ವಾರಸ್ಯ ದೊರೆಯದು. ರಸನೆಯಲ್ಲಿಯೇ ರುಚಿ ಯಿಲ್ಲವಾದರೆ ಷಡ್ರಸಾನ್ನಗಳಿಂದೇನು ? ಒಂದು ಜೀವ ಇನ್ನೊಂದು ಜೀವಕ್ಕೆ ಭಾವದ ಮುಖಾಂತರ ಹಬ್ಬಿ ಹರಡುವ ಪ್ರವೃತ್ತಿ ಇಂದು ಬಹುಮಟ್ಟಿಗೆ ಕಡಿಮೆಯಾಗಿದೆ.

ಒಳಗೇನೋ ಬರಿದಾಗಿದೆ. ಜನ ಜನರನ್ನು ಬೆಸೆಯುವುದು ಭಾವ, ಪ್ರೇಮ. ಅವು ಇಲ್ಲದಾಗ ಸಮಾಜ ಸೇವೆ, ದಲಿತರ ಉದ್ಧಾರ, ಪಂಥ ಪಂಥಗಳಲ್ಲಿ ಸೌಹಾರ್ದ, ಇವೆಲ್ಲ ಬರಿ ಜೊಳ್ಳುಮಾತುಗಳಾಗಿ ಪರಿಣಮಿಸು ವವು. ಇಷ್ಟೇ ಅಲ್ಲ, ಮಾತು ಹಾಗೂ ಕೃತಿಗಳಲ್ಲಿ ಅಂತರ ಬೆಳೆದು ಅಪ್ರಾಮಾಣಿಕತೆಯು ಎಲ್ಲೆಲ್ಲೂ ಕುಣಿದಾಡುವ ಪರಿಸ್ಥಿತಿಯು ಉಂಟಾದರೆ ಆಶ್ಚರ್ಯವಲ್ಲ.

ಜೀವನ ಸೌಂದರ್ಯ ದೃಷ್ಟಿಯುಂಟಾದವರಿಗೆ ಪರರೊಡನೆ ಸುಖ ದುಃಖಗಳನ್ನು ಅನುಭವಿಸಿ ಸಾಮಾಜಿಕ ಜೀವನದಲ್ಲಿ ಭಾಗವಹಿಸಿ ಆನಂದ ಪಡೆಯುವುದು ಸಹಜವಾಗುತ್ತದೆ. ಆಪ್ತರು, ಮಿತ್ರರು, ಬಾಂಧವರು ಎಂಬ ಕಲ್ಪನೆ ಬರಿ ಕಲ್ಪನೆಯಾಗಿ ಉಳಿಯದೆ ಕೃತಿಗಿಳಿಯುವುದು. ಸಾಮಾಜಿಕ ಹಾಗೂ ಸಾಮೂಹಿಕ ಉತ್ಸವಗಳು ಹಾಗು ಉತ್ಸವದ ಕಾರ್ಯಗಳು ಸಹಜ ವಾಗಿ ನಡೆದು ಜೀವನದಲ್ಲಿ ಸ್ವಾರಸ್ಯವನ್ನು ಬರಮಾಡಿಕೊಳ್ಳುವವು. ಆದು ದರಿಂದ ನಮಗಿಂದು ಬೇಕಾದುದು ಜೀವನ ಸೌಕರ್ಯಗಳನ್ನು ಸಂಗ್ರಹಿಸುವ ಪ್ರವೃತ್ತಿಯ ಜೊತೆಗೆ ಇತರರ ಬಾಳಿನಲ್ಲಿ ನಮ್ಮ ಬಾಳನ್ನು ಬೆರೆಸಿ ಸಂತೋಷ ಪಡುವ ಪ್ರವೃತ್ತಿ. ಜೀವನ ಸೌಂದರ್ಯವು ಹೊರ ಹೊಮ್ಮುವುದು ಇಂತಹ ಪ್ರವೃತ್ತಿಯಿಂದ.

ಜಗತ್ತನ್ನು ಇಂದು ಬರಿ ಬಿರುಗಾಳಿಯ ಸುಧಾರಣೆ ಆವರಿಸುತ್ತಿದೆ. ಮಾನವನು ವೇಗದ ಬೆನ್ನು ಹತ್ತಿದ್ದಾನೆ; ಬರಿಯ ಸಂಗ್ರಹ ಪ್ರವೃತ್ತಿಗೆ ಪಕ್ಕಾಗಿದ್ದಾನೆ. ಕೇವಲ ಪ್ರಯೋಜನ ದೃಷ್ಟಿಯ ಪರಿಣಾಮವಿದು. ಇದರಲ್ಲಿ

ನಿಜವಾದ ಸುಖವೆಂಬುದಿಲ್ಲ. ಸಂಗ್ರಹ, ಇನ್ನಿಷ್ಟು ಸಂಗ್ರಹ, ಮತ್ತಿಷ್ಟು ಸಂಗ್ರಹ; ವೇಗ, ಇನ್ನಿಷ್ಟು ವೇಗ, ಮತ್ತಿಷ್ಟು ವೇಗ; ಸ್ಥಳ, ಇನ್ನಿಷ್ಟು ಸ್ಥಳ, ಮತ್ತಿಷ್ಟು ಸ್ಥಳ–ಈ ಹವ್ಯಾಸದಿಂದ ಮಾನವನ ಅಂತರಂಗಸಂಪತ್ತಿನ ಅವಿಷ್ಕಾರಕ್ಕೆ ಅವಕಾಶ ದೊರೆಯದಂತಾಗಿದೆ. ಇದರ ಪರಿಣಾಮವೇನಾಗ ಬಹುದೆಂಬುದನ್ನು ಕೌಂಟ್ ಲಿಒ ಟಾಲಸ್ಟಾಯ್ ಅವರ "ಮನುಷ್ಯನಿಗೆ ಬೇಕಾದ ಭೂಮಿಯಷ್ಟು?" ಎಂಬ ಕಥೆ ಚೆನ್ನಾಗಿ ಮನಗಾಣಿಸುವಂತಿದೆ.

"ನೀನು ಇಲ್ಲಿಂದ ಓಡುತ್ತ ಹೋಗಿ ಎಲ್ಲಿ ನಿಲ್ಲುವಿಯೋ ಅಷ್ಟು ಭೂಮಿಯನ್ನೆಲ್ಲ ನಿನಗೆ ಇನಾಮು ಕೊಡುವೆ" ನೆಂದು ದೊರೆ ಒಬ್ಬನಿಗೆ ಹೇಳಿದಾಗ ಆ ಪ್ರಾಣಿ ಓಡಲು ವೆವೆದಲು ಮಾಡಿದ; ಓಡಿದ, ಓಡಿಯೇ ಓಡಿದ; ಜೀವ ಭಾವವನ್ನೆಲ್ಲ ಓಟದಲ್ಲಿ ಹಾಕಿ ಓಡಿದ. ಅಸೆಗೆ ಪಕ್ಕಾಗಿ ದಿಕ್ಕುತಪ್ಪಿ ಓಡಿದ. ಓಡುತ್ತಿದ್ದಂತೆಯೇ ಎಚ್ಚರತಪ್ಪಿ ಬಿದ್ದ. ಕೊನೆಗೆ ಒಂದು ಸ್ಥಳದಲ್ಲಿ ಬಿದ್ದಾಗ ತೇಕುವುದು ನಿಂತುಹೋಗಿತ್ತು; ಹರಣ ಹಾರಿಹೋಗಿತ್ತು. ಜನ ಹೋಗಿ ನೋಡಿದರು—"ಅವನಿಗೆ ಬೇಕಾದ ಭೂಮಿ ಇಷ್ಟು—ಹೌದು ಇಷ್ಟೇ. ಮೂರುವರೆ ಮೊಳ!" ಎಂದರು.

ಜಗತ್ತಿನ ಸಂಸ್ಕೃತಿಗೆ, ಆದುದರಿಂದ ನಿಜವಾದ ಜೀವನೋನ್ನತಿಗೆ ಕಾರಣವಾಗುವ ದೃಷ್ಟಿಗಳೆಂದರೆ ಸೌಂದರ್ಯದೃಷ್ಟಿ ಹಾಗು ಆಧ್ಯಾತ್ಮ ದೃಷ್ಟಿ. ಈಶ್ವರನು ಇದ್ದಾನೆ ಅಥವಾ ಇಲ್ಲವೆಂಬುದು ಅಧ್ಯಾತ್ಮದಲ್ಲಿ ಮುಖ್ಯವಲ್ಲ. ಆತ್ಮ ಅಮರವಾಗಿದೆ. ಜೀವನ ಸತ್ಯವಾಗಿದೆ, ಎಂಬುದೇ ಮುಖ್ಯ. ಆತ್ಮ ಅಮರವಾಗಿದೆ; ಜೀವನ ಸತ್ಯವಾಗಿದೆ, ಮತ್ತು ಸಂತತವಾಗಿದೆ ಎಂದು ಎಷ್ಟೆಷ್ಟು ಮನವರಿಕೆಯಾಗುವುದೋ ಅಷ್ಟಷ್ಟು ಮಾನವನ ಸಾಧನೆ–ಅದು ಭಕ್ತಿಯ ಸಾಧನೆಯೇ ಆಗಿರಲಿ, ಜ್ಞಾನೋಪಾಸನೆಯೇ ಆಗಿರಲಿ, ಕ್ರಿಯಾ ಸಾಧನೆಯೇ ಆಗಿರಲಿ–ಭರದಿಂದ ಸಾಗುತ್ತದೆ. ಮಾನವನ ಉನ್ನತಿಯ ಗುರಿಗೆ ಕಣ್ಣಿಟ್ಟ ಸಾಧನೆಯು ಭರದಿಂದ ಸಾಗಿದಷ್ಟು ಜೀವನವು ಸಂಸ್ಕೃತವಾಗುತ್ತದೆ, ಉನ್ನತವಾಗುತ್ತದೆ.

'ಅವತಾರ' ವೆಂಬುದನ್ನು ನಾವು ರೂಪಕವೆಂದೇ ತಿಳಿಯಬೇಕು. 'ದೇವ' ಎಂಬ ವಿಶಿಷ್ಟ ವ್ಯಕ್ತಿಯ ಅವತಾರವಲ್ಲ ಅದು; ಮಾನವನಲ್ಲಿ

ಅಡಗಿದ ಅತ್ಯುತ್ತಮ ಪ್ರವೃತ್ತಿಯ ಅವತಾರ. ಸಜ್ಜನರ ಹೃದಯದಲ್ಲಿ ಪರಮಾತ್ಮನು ವಾಸಿಸುತ್ತಾನೆಂದು ಹೇಳುವ ಮಾತಿನ ತಾತ್ಪರ್ಯವು ಇದೇ ಎಂದು ಕಾಣುತ್ತದೆ. ನಿಜವಾದ ಆಧ್ಯಾತ್ಮವನ್ನು ಸಾಧಿಸುವವನು, ಆಧ್ಯಾತ್ಮ ದೃಷ್ಟಿಯುಳ್ಳವನು, ಮಾನವ ಕುಲದಲ್ಲಿ ಒಂದು ಸತ್ವವನ್ನು ಕಾಣುತ್ತಾನೆ; ಮಾನವ ಕೋಟಿಯ ಕಲ್ಯಾಣವನ್ನು ಚಿಂತಿಸುತ್ತಾನೆ; ಮಾನವೋನ್ನತಿಯನ್ನು ಸಾಧಿಸಲು ಯತ್ನಿಸುತ್ತಾನೆ. ಬುದ್ಧ, ಕ್ರೈಸ್ತ, ಬಸವ, ಮಹಾತ್ಮಾಗಾಂಧಿ ಯವರಲ್ಲಿ ಆಧ್ಯಾತ್ಮ ದೃಷ್ಟಿಯ ಅವತಾರವೇ ಆಯಿತು; ಅವರ ಜೀವನದಲ್ಲಿ ಉನ್ನತ ಪ್ರಯೋಜನ, ಉನ್ನತ ಆಧ್ಯಾತ್ಮಗಳು ಸಮರಸವಾದುದನ್ನು ಕಾಣಬಹುದು.

— — — —

# ಸ್ವಪ್ನ ಸತ್ಯ

ನಮ್ಮ ಇಂದಿನ ಕನಸು
ನಿಮ್ಮ ನಾಳೆಯ ಮನಸು
ನಮ್ಮ ಇಂದಿನ ಹುಚ್ಚಿ
ಮುಂದೆಲ್ಲರಿಚ್ಚೆ

—ಕುವೆಂಪು

'ಬಾಳು ಒಂದು ಕನಸು' ಎಂದು ಹೇಳುವ ಹಿರಿಯರು ನಮ್ಮಲ್ಲಿ ಎಷ್ಟಿಲ್ಲ ? ನೆನಸಿಗೇ ಇಷ್ಟು ಮಹತ್ವವನ್ನು ಕೊಟ್ಟವರು ಕನಸಿಗೆ ಮಹತ್ವ ಕೊಡುವರೇ ? ಅಂತೆಯೇ ಕನಸನ್ನು ಅಣಕಿಸುವ ಕಥೆ ಕವನಗಳು ನಮ್ಮಲ್ಲಿ ಹುಟ್ಟಿಕೊಂಡಿವೆ.

" ತಿರುಕನೋರ್ವನೂರಮುಂದೆ
ಮುರುಕು ಧರ್ಮಶಾಲೆಯಲ್ಲಿ
ಒರಗಿರುತ್ತಲೊಂದು ಕನಸ ಕಂಡನೆಂತೆನೆ. "

—ಎಂದು ಪ್ರಾರಂಭವಾಗುವ ಕವಿತೆಯನ್ನು ಕನ್ನಡ ನಾಲ್ಕು ಇಯತ್ತೆಯನ್ನು ಮಾಡಿದವರೆಲ್ಲರೂ ಬಲ್ಲರು.

ತಿರುಕನ ಕನಸೇನೋ ಬಲು ಮೋಜಿನದು; ಕವಿತೆಯಲ್ಲಿ ಅದಕ್ಕೆ ಹೆಚ್ಚಿನ ರುಚಿ ಬಂದಿದೆ. ಆದರೆ ಆ ಕವಿತೆಯ ಕೊನೆಯಲ್ಲಿ ಹೇಳಿದ ತತ್ವ ನನಗಂತೂ ಇನ್ನೂ ತಿಳಿದಿಲ್ಲ. ಆ ಹಾಡಿನ ಮೊದ ಮೊದಲಿನ ಪದ್ಯಗಳು ರುಚಿ ಕೊಡುತ್ತವೆ. ಹುಡುಗರಿಗೂ ಹಿರಿಯರಿಗೂ ಕೂಡಿಯೇ ರುಚಿಯಾದ ಪದ್ಯಗಳವು. ಕಾರಣ ಗೊತ್ತೆ ? ತಿರುಕನು ಕನಸು ಕಾಣುವಷ್ಟು ಸಮಯವಾದರೂ ಸುಖವನ್ನು ಅನುಭವಿಸಿದನಲ್ಲ ?—ಎಂದು ನಮಗೆ ಸಮಾಧಾನ.

ಆ ಕನಸು ತಿರುಕನಿಗೆ ಕೊಟ್ಟ ಸುಖದ ಅನುಭವವು ನಮಗೂ ಆಗುವುದರಿಂದ ಆ ಕವಿತೆಯ ವಿಷಯದಲ್ಲಿ ನಮಗೆ ರುಚಿ. ಆದರೆ ತಿರುಕನ ಕನಸಿನಂತೆ ನಮ್ಮ ಬಾಳು ಎಂಬ ತತ್ವವನ್ನು ನಾವು ಬಿಟ್ಟುಕೊಡುವುದು ಕ್ಷೇಮ. ಕನಸು ತಿರುಕನಿಗೆ ಕೊಟ್ಟ ಸುಖವು ಕನಸಲ್ಲ ತಾನೆ? ಅವನು ಆ ಸುಖವನ್ನು ಸ್ವಪ್ನದಲ್ಲಿಯಾದರೂ ಅನುಭವಿಸಿದನೆಂಬ ಸತ್ಯವನ್ನು ಅಲ್ಲಗಳೆಯುವುದು ಹೇಗೆ ?

ಅನುಭವದ ದೃಷ್ಟಿಯಿಂದ ಜೀವನವು ಎಷ್ಟು ಸತ್ಯವೋ ಅಷ್ಟೇ ಸ್ವಪ್ನವೂ ಸತ್ಯ. ಸ್ವಪ್ನ ಸಮಯದಲ್ಲಿ ನಮ್ಮ ದೈಹಿಕ ವ್ಯಾಪಾರ ನಿಂತಿರಬಹುದು. ಆದರೆ ಅಂತರಂಗಿಕ ಜೀವನವು ತರಂಗ ತರಂಗವಾಗಿ ಹೊಮ್ಮುತ್ತಲೇ ಇರುತ್ತದೆ. ಒಮ್ಮೊಮ್ಮೆ ಜೀವನಕ್ಕಿಂತ ಸ್ವಪ್ನ ಅದೆಷ್ಟೋ ಸುಂದರವಾಗಿರುತ್ತದೆ. " ಸ್ವಪ್ನ ಸುಂದರ " ಎಂದು ಸಾಹಿತಿಗಳು ಸೌಂದರ್ಯದ ಪಾರಮ್ಯವನ್ನು ವರ್ಣಿಸುವದನ್ನು ನಾವು ಓದಿದ್ದೇವಷ್ಟೇ ?

ಅದೆಷ್ಟೋ ಸಲ ಸ್ವಪ್ನವೇ ಜೀವನಕ್ಕೆ ಬಣ್ಣ ಬರೆಯುವುದುಂಟು. ಸ್ವಪ್ನವೆಂದಾಗ ನನಗೆ ಸಪ್ತವರ್ಣದ ಇಂದ್ರ ಧನುವಿನ ನೆನಪಾಗುತ್ತದೆ. "ಕೆಲಿಡೋಸ್ಕೋಪ್ " ಎಂಬ ಗಾಜು ಯಂತ್ರ ನಿಮಗೆ ಗೊತ್ತಿದೆಯಷ್ಟೇ ? ಕೆಲಿಡೋಸ್ಕೋಪ್ ಕೈಗೆತ್ತಿಕೊಂಡು ಕಣ್ಣಿಗೆ ಹಚ್ಚಿ ತಿರುಗಿಸಿದಂತೆ ಅದರಲ್ಲಿದ್ದ ಬಣ್ಣ ಬಣ್ಣದ ಕಾಜಿನ ತುಂಡುಗಳು ಅದೆಷ್ಟು ವರ್ಣ ಹಾಗು ರೂಪಜಾಲಗಳನ್ನು ನಮ್ಮ ಕಣ್ಣ ಮುಂದೆ ಕುಣಿಸುತ್ತವೆ !

ಕನಸುಗಳೂ ಇವೇ ಬಗೆಯಾಗಿ ನಮ್ಮ ಮನದ ಮುಂದೆ ವಿವಿಧ ರೂಪವರ್ಣ-ಜಾಲವನ್ನು ನೆಯ್ದು ತಣಿಸುವುದುಂಟು. ಜೀವನದಲ್ಲಿ ಫಲಿಸಿದ ಅದೆಷ್ಟೋ ಬಣ್ಣ ಬಣ್ಣದ ಬಯಕೆಯುಗಳು ಕನಸಿನಲ್ಲಿ ಈಡೇರುವುದುಂಟು. ಕನಸಿನಲ್ಲಿ ಈಡೇರಿದರೇನು ?—ಅನುಭವವೊಂದೇ ಅಲ್ಲವೇ ?

ನೆನಸಿನಲ್ಲಿ ಕೈಗೂಡದ ಬಯಕೆಗಳು ಕನಸಿನಲ್ಲಿಯಾದರೂ ತೃಪ್ತಿಪಡದೆ ಹೋದರೆ ಮನಸ್ಸು ರಣರಂಗವಾಗಿ ಪರಿಣಮಿಸಬಹುದು. ಆದುದರಿಂದ ಮನಸ್ಸಿನ ಸ್ವಾಸ್ಥ್ಯಕ್ಕೆ ಕನಸುಗಳು ಅದೆಷ್ಟೋ ಮಟ್ಟಿಗೆ ಕಾರಣ

ವಾಗುತ್ತವೆ. ಆಧುನಿಕ ಮನಶ್ಶಾಸ್ತ್ರದ ಆಚಾರ್ಯರಾದ ಫ್ರಾಯ್ಡ್, ಯುಂಗ್ ಹಾಗೂ ಆಡ್ಲರ್ ಮೊದಲಾದವರ ಸಂಶೋಧನಗಳನ್ನು ಈ ಸಂದರ್ಭದಲ್ಲಿ ಪರಿಚಯ ಮಾಡಿಕೊಂಡು ಈ ಮಾತಿನ ಯಥಾರ್ಥತೆಯನ್ನು ಮನಗಾಣಬಹುದು.

ಜೀವನವೇನೂ ತುಂಬಾ ಕಠಿನ ಕರ್ಕಶಗಳಿಂದ ಕೂಡಿದುದಲ್ಲ. ಆದರೂ ಕೆಲವರಿಗೆ ಅವರು ಬೆಳಸಿಕೊಂಡುಬಂದ ದೃಷ್ಟಿಯ ಪರಿಣಾಮವಾಗಿ ಬಾಳು ಬೇರಿನಿಂದ ತುದಿಯವರೆಗೆ ಕಹಿಯಾಗುವುದುಂಟು. ಅವರು ಬಾಳಿನಲ್ಲಿ ಸಿಹಿಯನ್ನು ಅಪೇಕ್ಷಿಸಿದರೆ ತಪ್ಪಲ್ಲ ತಾನೆ? ಅವರಿಗೆ ಬಾಳಿನಲ್ಲಿ ಸಿಹಿ ದೊರೆಯದಿದ್ದರೂ ಕನಸಿನಲ್ಲಿ ದೊರೆಯಬಹುದು. ಹೀಗೆ ಬೇಸರಗೊಂಡ ಜೀವನವನ್ನು ಸ್ವಪ್ನಸುಖವು ಮೃದುಗೊಳಿಸಬಹುದು; ಮಧುರಗೊಳಿಸಬಹುದು

ಇದು ಮಾತ್ರವಲ್ಲ ಕನಸಿನ ಪ್ರಯೋಜನ. ಉತ್ತಮವಾದ ಸಾಹಿತ್ಯವನ್ನು, ಕಲೆಯನ್ನು ಸ್ವಪ್ನಗಳು ಒದಗಿಸಬಹುದು; ಒದಗಿಸುತ್ತ ಬಂದಿವೆ. "ಅವನೇನು ಸ್ವಪ್ನಜೀವಿ?" ಎಂದು ಕನಸಿಗರ ಬಗೆಗೆ ಮರುಕವನ್ನು ತೋರ್ಪಡಿಸುವ ಜನರು ಸಾಕಷ್ಟಿದ್ದಾರೆ. ಅದರೆ ಪಾಪ, ಸ್ವಪ್ನ ಜೀವನದ ಸ್ವಾರಸ್ಯವೇ ಅವರಿಗೆ ಗೊತ್ತಿಲ್ಲ.

ಪ್ರಪಂಚದ ಸಂಗೀತ ಸಾಹಿತ್ಯ, ವಾಸ್ತುಶಿಲ್ಪ; ಚಿತ್ರಶಿಲ್ಪ—ಎಲ್ಲವೂ ಸ್ವಪ್ನಜೀವಿಗಳು ಪಡೆದ ಫಲಗಳು ಎಂಬುದನ್ನು ಅವರು ಅರಿಯರು. ಇರುಳುಗನಸಿನಲ್ಲಿ ಪಡೆದ ಫಲಗಳಾಗಿರದಿದ್ದರೆ ಹಗಲುಗನಸಿನಲ್ಲಿ ಪಡೆದ ಫಲಗಳವು. ಕಲಾವಿದನಾದವನು ತಾನು ಕಂಡ ಕನಸನ್ನೇ ಕಲೆಯಲ್ಲಿ ಪ್ರತಿಬಿಂಬಿಸುತ್ತಾನೆ. ಮನೋವಿಜ್ಞಾನವು ಈ ಮಾತಿಗೆ ಬೆಂಬಲವನ್ನು ಕೊಡುತ್ತದೆ.

ಸ್ಟಿವೆನ್‌ಸನ್ ಎಂಬ ಅಂಗ್ಲ ಸಾಹಿತಿ ತಾನು ಹಗಲುಗನಸಿಗೆ ಪಕ್ಕಾದಾಗ ತನಗೆ ಬೇರೊಂದು ವ್ಯಕ್ತಿತ್ವವು ಪ್ರಾಪ್ತವಾಗಿ ತಾನು ಬರೆದ ಕಥೆಗಳಿಗೆ ವಸ್ತುವನ್ನು ಒದಗಿಸಿದ ಸಂಗತಿಯನ್ನು ತಾನೇ ಹೇಳಿದ್ದಾನೆ. ಕಾವ್ಯವು ರೂಪುಗೊಳ್ಳುವುದು ಸಾಮಾನ್ಯವಾಗಿ ಇದೇ ರೀತಿಯಿಂದ.

ಅದೇನೇ ಇರಲಿ, ಹಗಲುಗನಸೆಂದು ನಾವು ಹಳಿಯುವ ಲಹರಿಯು ಜೀವನದ ವಿವಿಧ ಕ್ಷೇತ್ರಗಳಲ್ಲಿ ಸೌಂದರ್ಯದ ಮಂದಿರಗಳನ್ನು ಕಟ್ಟಲು ನೆರವಾಗಿದೆಯೆಂಬುದನ್ನು ತಿಳಿದುಕೊಂಡರೆ ಸ್ವಪ್ನದ ಆವರಣದಲ್ಲಿ ಅಂತರಂಗವು ಸಾಧಿಸುವ ವಿಲಾಸ ವಿಕಾಸಗಳ ಕಲ್ಪನೆಯಾದೀತು.

ಉಳಿದ ಕಲೆಗಳಿಗೆಲ್ಲ ಮಾತೃಸ್ಥಾನದಲ್ಲಿದ್ದ ಜಿವನಕಲೆಯೂ ಸ್ವಪ್ನಕ್ಕೆ ಸಂಬಂಧಿಸಿದುದು. ಬುದ್ಧ, ಮಹಾವೀರ, ಕ್ರೈಸ್ತ ಮಹಮ್ಮದ, ಶಂಕರ, ಬಸವ, ಗಾಂಧಿ ಮೊದಲಾದ ಮಹಾನುಭಾವರು ಕಂಡ ಕನಸುಗಳೇ ಉತ್ಕೃಷ್ಟವಾದ ಜೀವನ ಮಾರ್ಗಗಳಾಗಿ ಪರಿಣಮಿಸಿದುವೆಂಬುದನ್ನು ಬೇರೆ ಹೇಳಬೇಕೇ? ಜೀವನವನ್ನು ಬೆಳಗಲು ಇಳಿದ ಜೀವಜ್ಯೋತಿಗಳು ಕಂಡ ಅಮೋಘವಾದ ಸ್ವಪ್ನಗಳೇ ಉದಾತ್ತ ಧ್ಯೇಯಗಳನ್ನು ಸಾಧಿಸಲು ಅವರಿಗೆ ಪ್ರೇರಣೆಯನ್ನು ಪೂರೈಸುತ್ತವೆ.

ವಿಚಾರ ಪ್ರಣಾಲಿಗಳು ಇಂದಿನ ಬಾಳನ್ನು ಆಳುತ್ತವೆ ಎಂಬ ಮಾತನ್ನು ನಾವು ಕೇಳಿ ಬಲ್ಲೆವಷ್ಟೆ? ಈ ಆಲೋಚನೆಗಳೆಲ್ಲ, ಈ ವಿಚಾರ ಪ್ರಣಾಲಿಗಳೆಲ್ಲ ಕನಸಿನ ಬಗೆಗಳೇ.

ಕನಸಿನ ಪ್ರಯೋಜನ ಜೀನನಕಲೆಗೆ ಮಾತ್ರವಲ್ಲ, ಜೀವನ ವಿಜ್ಞಾನಕ್ಕೂ ಉಂಟು. ಕಲ್ಪನೆಯು—ಅದು ವ್ಯವಹಾರಿಕ ಕಲ್ಪನೆಯೇ ಅಗಿರಲಿ! ಕಲಾತ್ಮಕ ಕಲ್ಪನೆಯೇ ಆಗಿರಲಿ—ಹಗಲುಗನಸಿನ ಒಂದು ಬಗೆ. ವಿಜ್ಞಾನದ ಶೋಧಗಳು ವಿಜ್ಞಾನಿಗಳ ವ್ಯವಹಾರಿಕ ಕಲ್ಪನೆಯ (Pragmatic imagination) ಮೇಲೆ ನಿಂತಿವೆ. ಎಚ್ಚರದಲ್ಲಿ ಬಗೆಹರಿಯದ ವಿಜ್ಞಾನದ ಸಮಸ್ಯೆಗಳೆಷ್ಟೋ ವಿಜ್ಞಾನಿಗಳ ಕನಸಿನಲ್ಲಿ ಬಗೆಹರಿದುವೆಂಬ ಸಂಗತಿಯನ್ನು ಮನದಂದರೆ ಜಾಗ್ರತ ಜೀವನದ ಮೇಲೆ ಸ್ವಪ್ನಗಳು ಬೀರುವ ಪರಿಣಾಮದ ಕಲ್ಪನೆಯಾದೀತು.

ಹಾಗಾದರೆ ನಾವೆಲ್ಲ ಕನಸು ಕಾಣಬೇಕು. ಇರಳುಗನಸುಗಳನ್ನಲ್ಲ; ಹಗಲುಗನಸುಗಳನ್ನು; ಕೇವಲ ನಮ್ಮ ನಮ್ಮ ಪ್ರಗತಿಯ ಕನಸುಗಳನ್ನಲ್ಲ; ಎಲ್ಲರ ಪ್ರಗತಿಗೆ ಕಾರಣವಾಗುವಂತಹ ಕನಸುಗಳನ್ನು;ಬರಿ ಇಂದಿನ ಬಾಳಿನ

ಕನಸುಗಳನ್ನಲ್ಲ. ಬರಲಿಹ ಬಾಳಿನ ಕನಸುಗಳನ್ನು. ನಮ್ಮ ಇಂದಿನ ಕನಸು ನಾಳೆ ನಿಮ್ಮಯಿ ಮನಸು, ಎಂದು ಕವಿ ಕುವೆಂಪು ಅವರು ಕನಸಿನ ಘನತೆಯನ್ನು ಸೂಚಿಸಿದ್ದಾರೆ. ಬನ್ನಿ, ಕನಸ ಕಟ್ಟುವಾ: ಏಕೆಂದರೆ ಕನಸೇ ರೂಪ ತಾಳಿದಾಗ ಸಾಹಿತ್ಯವಾಗುತ್ತದೆ; ಶಿಲ್ಪವಾಗುತ್ತದೆ; ಸಂಗೀತವಾಗುತ್ತದೆ. ನಾಗರಿಕ ಜೀವನದ ಸೌಕರ್ಯವಾಗುತ್ತದೆ; ಜೀವನ ಸೌಂದರ್ಯದ ಸಾಧನವಾಗುತ್ತದೆ; ಸುಸಂಸ್ಕೃತ ಜೀವನದ ಸಾಮಗ್ರಿಯಾಗುತ್ತದೆ. ಈ ದೃಷ್ಟಿಯಿಂದ ಜೀವನ ಬೇರೆ ಅಲ್ಲ; ಸ್ವಪ್ನ ಬೇರೆ ಅಲ್ಲ. ಸತ್ಯ ಮತ್ತು ಸ್ವಪ್ನ ಇವೆರಡೂ ಒಂದನ್ನೊಂದು ಅಲಿಂಗಿಸಿ ಜೀವನವನ್ನು ಪೂರ್ಣಗೊಳಿಸುವ ಪೂರಕಗಳು. ಒಳ್ಳೆಯ ಕನಸೇ ಒಳ್ಳೆಯ ಬಾಳಿಗೆ ದಾರಿತೋರುವ ತಾರೆ.

———

# ಕಂಬನಿ, ಹೂನಗೆ

( ಕಹಲೀಲ್ ಗಿಬ್ರಾನ್ ಅವರ ' A Tear and A smile '
ಎಂಬ ಬರಹದ ಅನುವಾದ )

ಜನ ಜಂಗುಳಿ ತಳೆವ ಹರ್ಷೋನ್ಮಾದಕ್ಕಿಂತ ನನ್ನ ದುಃಖಾಶ್ರುಗಳೇ ನನಗೆ ಹೆಚ್ಚು ಪ್ರಿಯ. ನೋವಿನ ಸೋಂಕಿನಿಂದ ಮನದ ಅಂತಃಕರಣದಿಂದ ಹೊರಹೊಮ್ಮುವ ಕಂಬನಿಗಳನ್ನು ಕೊಟ್ಟು ನಗೆಯನ್ನು ಕೊಳ್ಳಲೆಳಸುವವನು ನಾನಲ್ಲ. ನನ್ನ ಬಾಳಿನಲ್ಲಿ ಕಂಬನಿಯ ಮುಗುಳುನಗೆಯನ್ನಪ್ಪಿ ನಿಲಲೆಂಬುದೇ ನನ್ನ ಎದೆಯ ಹಂಬಲ.

ನನ್ನ ಅಂತರಂಗವನ್ನು ತೊಳೆದು ಬಾಳಿನ ಗುಟ್ಟನ್ನು ಅರಹುವ ಶೋಕ ಜಲ ನನಗಿರಲಿ. ಜೊತೆಗೆ ನನ್ನ ಬಾಂಧವರತ್ತ ನನ್ನನ್ನು ಸೆಳೆದು ಅವರೊಡನೆ ನನ್ನನ್ನು ಒಂದುಗೂಡಿಸುವ ಮಂದಹಾಸ ನನ್ನದಾಗಿರಲಿ. ಮೇಲಾಗಿ ನನ್ನ ಮನೋದ್ದೈವತದ ವೈಭವವನ್ನು ಪ್ರತಿಬಿಂಬಿಸುವ ಮುಗುಳುನಗೆ ನನ್ನದಾಗಿರಲಿ.

ಬಾಳಿನಲ್ಲಿ ಎದೆಗೆಟ್ಟವರೊಡನೆ ನನ್ನನ್ನು ಸಮರಸಗೊಳಿಸುವ ಕಂಬನಿ ನನ್ನ ಕಣ್ಣಿನಲ್ಲಿ ತುಂಬಿ ನಿಲ್ಲಲಿ. ಜೀವನೋತ್ಸಾಹದ ಪ್ರತೀಕವಾಗಿ ನನ್ನ ಎದೆಯಲ್ಲಿ ಹೂನಗೆ ಅರಳಿ ಬರಲಿ.

ನಿರಾಶೆಯಲ್ಲಿ ನಿಸ್ಸತ್ವ ಜೀವಿಯಾಗಿ ಬದುಕುವುದಕ್ಕಿಂತ ಸತ್ವಯುಕ್ತ ಜೀವನಕ್ಕಾಗಿ ಹಂಬಲಿಸಿ ಲಯವಾಗುವುದೇ ನನಗೆ ಇಷ್ಟವಾದುದು.

ಪ್ರೇಮದ ಹಾಗು ಸೌಂದರ್ಯದ ಅಭಿಲಾಷೆ ನನ್ನ ಆತ್ಮದ ಆಳದಲ್ಲಿ ಚಿಮ್ಮುತ್ತಲಿರಲಿ. ಒಲವಿಗಾಗಿ ಹಾಗು ಚೆಲುವಿಗಾಗಿ ಹಂಬಲಿಸುವವರ ನಿಟ್ಟುಸಿರನ್ನು ನಾನು ಆಲಿಸಿದ್ದೇನೆ. ಮಧುರ ಸಂಗೀತಕ್ಕಿಂತಲೂ ಅದು ಮಧುರತರವಾದುದು.

ಸಂಜೆಯ ಸೋಂಕಿಗೆ ತನ್ನ ದಳದಳಗಳನ್ನು ಮುಚ್ಚಿ ತನ್ನ ಹಂಬಲ ವನ್ನು ಅಪ್ಪಿ ಹೂ ರಾಣಿ ನಿದ್ರೆಹೋಗುತ್ತಾಳೆ. ಇರುಳು ಅಳಿದು ಬೆಳಗು ತುಳುಕಿ ಬಂದಹಾಗೆ ನೇಸರನ ಚುಂಬನಕ್ಕಾಗಿ ಅವಳು ತನ್ನ ಚೆಂದುಟಿಗಳನ್ನು ಮರಳಿ ತೆರೆಯುತ್ತಾಳೆ.

ಹೂವಿನ ಬಾಳೆಂದರೆ ಕಂಪನ್ನು ಒಡಲಲ್ಲಿ ತುಂಬಿಕೊಳ್ಳಲು ಅದು ತಳೆವ ಹಂಬಲ ಹಾಗು ಅ ಹಂಬಲದ ಪೂರೈಕೆ.

ಕಡಲ ನೀರು ಉಗಿಯಾಗಿ ಮುಗಿಲಿಗೇರುತ್ತದೆ. ಉಗಿಗೆ ಉಗಿ ಕೂಡಿ ಮೋಡವಾಗುತ್ತದೆ. ಮೋಡವು ಗಿರಿ ಕಂದರಗಳ ಮೇಲೆ ಅಲೆಯುತ್ತ ಹೋಗಿ ತಂಗಾಳಿಯ ಸ್ಪರ್ಶವನ್ನು ಪಡೆಯುತ್ತದೆ. ಮಂದ ಮಾರುತನ ಸ್ಪರ್ಶ ದಿಂದಾಗಿ ಅದು ಕಂಬನಿ ಸುರಿದು ಹೊಲಗದ್ದೆಗಳಿಗಿಳಿದು ತನ್ನ ತವರೂರಾದ ಕಡಲಿಗೆ ಮರಳಿ ಬರುತ್ತದೆ.

ಮೋಡದ ಬಾಳು ಇಂತು ಅಗಲಿ ಕೂಡುವ ಬಾಳು. ಆ ಬಾಳಿನಲ್ಲಿ ಕಂಬನಿ ಹೂನಗೆ ಎರಡೂ ಉಂಟು.

ಇದೇ ರೀತಿಯಲ್ಲಿ ಆತ್ಮನು ಪರಮಾತ್ಮನಿಂದ ಅಗಲಿ ಬಂದು ಭೌತಿಕ ಪ್ರಪಂಚದಲ್ಲಿ ಸಂಚರಿಸಿ ಮೋಡದಂತೆ ದುಃಖದ ಗಿರಿಯ ಮೇಲೆ ಮತ್ತು ಆನಂದದ ಬಯಲು ಸೀಮೆಯ ಮೇಲೆ ಹಾದು ಮರಣವೆಂಬ ಮಂದಾ ನಿಲನ ಸ್ಪರ್ಶವನ್ನು ಪಡೆದು ಮರಳಿ ತನ್ನ ಮೂಲ ಸ್ಥಳವಾದ ಒಲವಿನ ಹಾಗು ಚೆಲುವಿನ ಕಡಲನ್ನು ಸೇರುತ್ತದೆ.

— — — —

# ಪ್ರಸಾದ

ವಚನದಲ್ಲಿ ನಾಮಾಮೃತ ತುಂಬಿ
ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ
ಕಿವಿಯಲ್ಲಿ ನಿಮ್ಮ ಕೀರ್ತನೆ ತುಂಬಿ
ಕೂಡಲ ಸಂಗಮದೇವಾ ನಿಮ್ಮ ಚರಣ ಕಮಲದೊಳಗಾನು ತುಂಬಿ.

—ಬಸವಣ್ಣನವರು

ತುಂಬಿಗಳು ಹೂವಿನಿಂದ ಹೂವಿಗೆ ಅಲೆದು ಮಕರಂದವನ್ನು ಸಂಗ್ರಹಿಸುತ್ತವೆ. ಸತತೋದ್ಯೋಗವು ಅವುಗಳಲ್ಲಿ ಎದ್ದು ಕಾಣುವ ಗುಣ. ಆ ಗುಣವನ್ನು ನಾವು ಮಾದರಿಯಾಗಿಟ್ಟುಕೊಂಡು ನಡೆಯಬೇಕೆಂದು ಹಿರಿಯರು ಹೇಳುತ್ತ ಬಂದಿದ್ದಾರೆ. ಸತತೋದ್ಯೋಗವನ್ನು ಅವುಗಳಿಂದ ನಾವು ಕಲಿಯತಕ್ಕದ್ದೇ. ಆದರೆ ಇದಕ್ಕಿಂತ ಹೆಚ್ಚಿನ ತತ್ತ್ವವೊಂದು ಅವುಗಳ ಜೀವನದಲ್ಲಿ ಅಡಗಿದೆ. ಅವು ತಿರಿದು ತರುವ ಮಕರಂದ ಒಂದಲ್ಲ; ಅನೇಕ. ಅವು ಮುತ್ತಿಡುವ ಹೂವು ಒಂದೇ? ಅನೇಕ. ಆದರೂ ಅನೇಕ ಹೂಗಳ ಅನೇಕ ಬಗೆಯ ಮಕರಂದವನ್ನು ಅತ್ಯಂತ ಮಧುರವಾದ ಮಧುವಿಗೆ ತಿರುಗಿಸುವ ರಾಸಾಯನಿಕ ರಹಸ್ಯ ತುಂಬಿಗಳಲ್ಲಿದೆ. ಜೇನ್ನೊಣಗಳು ಇಂತು ರಾಸಾಯನಿಕ ಕ್ರಿಯೆಯಿಂದ ಸಿದ್ಧಗೊಳಿಸುವ ಜೇನುತುಪ್ಪ ಸಿಹಿಯಾಗಿರುವುದು ಅಷ್ಟೇ ಅಲ್ಲ: ಹಿತಕರವೂ ಆಗಿರುತ್ತದೆ. ಅದು ಅಧರಕ್ಕೂ ಸಿಹಿ; ಉದರಕ್ಕೂ ಸಿಹಿ.

ತುಂಬಿಗಳು ತಮ್ಮ ದುಡಿತದಿಂದ ದೊರೆತ ಹೂ ಹುಡಿಯನ್ನೆಲ್ಲ ಮಾನವ ಲೋಕದ ಅಮೃತವಾದ ಮಧುವಿಗೆ ತಿರುಗಿಸುವಂತೆ-ನಾವು ನಮಗೆ ದೊರೆತುದನ್ನೆಲ್ಲ ಪ್ರಸಾದಕ್ಕೆ ತಿರುಗಿಸುವುದೇ ಮಾನವ ಜೀವನ ರಹಸ್ಯವೆಂದು ಹೇಳಲು ಅಭ್ಯಂತರ ತೋರುವುದಿಲ್ಲ. ನಮ್ಮ ಪಾಲಿಗೆ ಬಂದುದನ್ನೆಲ್ಲ ಪಂಚಾಮೃತಗೊಳಿಸಿಕೊಳ್ಳಬಲ್ಲ ಕಲೆಯೇ ಜೀವನ ಕಲೆ.

ನಿತ್ಯ ನಮ್ಮ ಪಾಲಿಗೆ ಬರುವ ಅನ್ನವನ್ನು ಪ್ರಸಾದವೆಂದು ಭಾವಿಸುವುದುಂಟು. ಪ್ರಸಾದವೆಂದರೆ ಅನುಗ್ರಹ; ಕೃಪೆ. ನಮಗೆ ದೊರೆತ ಅನ್ನ ಪರಮಾತ್ಮನ ಅನುಗ್ರಹ ಎಂಬ ಭಾವನೆಯು 'ಪ್ರಸಾದ'ದ ಭಾವನೆಗೆ ಮೂಲವಾಗಿದೆ. ಈ ಗ್ರಹಿಕೆ ತಕ್ಕಮಟ್ಟಿಗೆ ಸರಿಯಾದುದು; ಆದರೆ ಸಂಪೂರ್ಣವಾದುದಲ್ಲ. ಏಕೆಂದರೆ ಅನ್ನವು ಪಂಚಜ್ಞಾನೇಂದ್ರಿಯಗಳಲ್ಲಿ ಒಂದಾದ ರಸನೇಂದ್ರಿಯಕ್ಕೆ ಮಾತ್ರ ಸಂಬಂಧಿಸಿದುದು; ಪ್ರಸಾದದ ಅರ್ಥ ಬಹಳ ವ್ಯಾಪಕವಾದುದು. ಅದು ಎಲ್ಲ ಜ್ಞಾನೇಂದ್ರಿಯಗಳಿಗೂ ಸಂಬಂಧಿಸಿದುದು. ಶಬ್ದ, ರೂಪ, ರಸ, ಗಂಧ, ಸ್ಪರ್ಶ ಇವು ಅನುಕ್ರಮವಾಗಿ ಕರ್ಣ, ನೇತ್ರ, ರಸನೆ, ಘ್ರಾಣ ಮತ್ತು ಸ್ಪರ್ಶ ಈ ಪಂಚೇದ್ರಿಯಗಳ ವಿಷಯಗಳು. ವ್ಯಾಪಕಾರ್ಥದಲ್ಲಿ ಶಬ್ದ ಕರ್ಣೇಂದ್ರಿಯದ ಮೂಲಕ ನಾವು ಸ್ವೀಕರಿಸುವ ಪ್ರಸಾದ; ರೂಪ ನೇತ್ರೇಂದ್ರಿಯದ ಮೂಲಕ ಸ್ವೀಕರಿಸುವ ಪ್ರಸಾದ. ರಸ ರಸನೇಂದ್ರಿಯದಿಂದ ಸ್ವೀಕರಿಸುವ ಪ್ರಸಾದ. ಅದರಂತೆ ಗಂಧ ಘ್ರಾಣೇಂದ್ರಿಯವು ಸ್ವೀಕರಿಸುವ ಪ್ರಸಾದ; ಹಾಗೆಯೇ ಸ್ಪರ್ಶವೆಲ್ಲ ಸ್ಪರ್ಶೇಂದ್ರಿಯದ ಮೂಲಕ ದೊರೆಯುವ ಪ್ರಸಾದ. ಆದರೆ ಪಂಚ ಜಾನೇಂದ್ರಿಯಗಳ ಪಂಚವಿಷಯಗಳು ಪಂಚಾಮೃತವಾಗಿ ಎಂದರೆ ಪ್ರಸಾದವಾಗಿ ಪರಿಣಮಿಸುವುದು ಆ ವಿಷಯಗಳನ್ನು ಸ್ವೀಕರಿಸುವ ಮನೋಭಾವವನ್ನು ಕೂಡಿದೆ. ಸರಿಯಾದ ಚಿತ್ತವೃತ್ತಿಯಿಂದ ಈ ಪಂಚ ವಿಷಯಗಳನ್ನು ಸ್ವೀಕರಿಸಿದರೆ ಅವು ಪ್ರಸಾದವಾಗಿ ನಮ್ಮ ಜೀವಭಾವಗಳಿಗೆ, ನಮ್ಮ ಅಂತರಾತ್ಮಕ್ಕೆ ಪೋಷಣೆಯನ್ನು ಪೂರೈಸುತ್ತವೆ.

ಇಲ್ಲಿ ಗಮನಿಸಬೇಕಾದ ಮಾತೆಂದರೆ ನಮ್ಮ ತುಂಬು ಜೀವನಕ್ಕೆ ಅಂತರಾತ್ಮದ ಪೋಷಣೆಗೆ, ನಮ್ಮ ಸರ್ವಾಂಗೀಣ ಉನ್ನತಿಗೆ ಅನುಕೂಲವಾಗುವ ಸಾಮಗ್ರಿಯನ್ನು ದುಡಿಮೆಯಿಂದ ಸಂಪಾದನೆ ಮಾಡಿ ನಮಗೂ ಇತರರಿಗೂ ಕೂಡಿಯೇ ಒಳಿತಾಗುವ ಬಗೆಯಲ್ಲಿ ಅದನ್ನು ವಿನಿಯೋಗ ಮಾಡಬೇಕೆಂಬುದು. ಹಾಗಾದರೆ ಜೀವನ ಸಾಮಗ್ರಿಯ ಸಂಪಾದನೆ, ಅದರ ಆಯ್ಕೆ, ಅದರ ಮಿತವಾದ ವಿನಿಯೋಗ, ನಮಗೂ ಇತರರಿಗೂ ಕಲ್ಯಾಣವಾಗುವಂತೆ ಕೂಡಿಕೊಂಡು ಅದನ್ನು ಸ್ವೀಕರಿಸುವ ಸಾಮಾಜಿಕ ನೀತಿ. ಬರಿ ಅಧರಕ್ಕಲ್ಲದೆ, ಉದರಕ್ಕೂ ಅದನ್ನು ಸಿಹಿ ಮಾಡಿಕೊಳ್ಳುವ ಜೀವನ ಕಲೆ— ಈ ಎಲ್ಲ ಅಂಶಗಳು 'ಪ್ರಸಾದ'ದಲ್ಲಿ ಸಮಾವೇಶವಾಗುತ್ತವೆ.

ಬಾಳಿನಲ್ಲಿ ಎಡರು ತೊಡರುಗಳು ಬಂದೇ ಬರುತ್ತವೆ; ಅವುಗಳನ್ನು ಕೂಡ ಸ್ವಾಗತಿಸಿ ಪರಿಣಾಮದಲ್ಲಿ ಅವು ಕೂಡ ನಮಗೆ ಹಿತ ಮಾಡುವಂತೆ ಅವುಗಳನ್ನು ತಿರುಗಿಸಿಕೊಳ್ಳುವ ಚಿತ್ತರಸಾಯನವುಳ್ಳವರಿಗೆ ಮಾತ್ರ ಪ್ರಸಾದ ಲಭ್ಯವಾಗುತ್ತದೆ. ಬಾಳಿನಲ್ಲಿ ನಮ್ಮ ಪಾಲಿಗೆ ಬಂದುದೆಲ್ಲ ನಮ್ಮ ಒಳಿತಕ್ಕಾಗಿ ಎಂಬ ನಂಬುಗೆ ಮೊದಲು ಬೇಕು ಪ್ರಸಾದವನ್ನು ಬಯಸುವವರಿಗೆ. ನಾವು ಜೀವನಕ್ಕಾಗಿ ಜಗತ್ತಿಗೆ ಬಂದುದೇ ಒಂದು ಸುವರ್ಣ ಸಂಧಿ. ಅದನ್ನು ಪಡೆದು ಜೀವನವನ್ನು ಸರ್ವಾಂಗ ಸುಂದರಗೊಳಿಸುವುದೇ ನಾವು ಮಾಡಬೇಕಾದ ಕಾರ್ಯ. ಆ ಕಾರ್ಯವನ್ನು ನಿತ್ಯವೂ ಕೈಕೊಂಡು ಅದನ್ನು ಪರಿಶುದ್ಧ ಮನದಿಂದ ನಿರ್ವಹಿಸುವುದರಿಂದ ಉಂಟಾಗುವ ಆನಂದವೇ ಪ್ರಸಾದ.

ಪ್ರಸಾದದ ಅರ್ಥ ಹೀಗೆ ವಿಶಾಲವಾಗಿದೆ, ಈ ಅರ್ಥದಲ್ಲಿಯೇ ಶಿವಶರಣರು ಅದನ್ನು ಅನುಷ್ಠಾನಕ್ಕೆ ತಂದರು. ಶರಣ ಮಾರ್ಗಕ್ಕೆ ವಿಶಿಷ್ಟವಾದ ಅಷ್ಟಾವರಣ ಹಾಗು ಷಟ್‌ಸ್ಥಲಗಳೆರಡರಲ್ಲೂ 'ಪ್ರಸಾದ'ವು ಸಮಾವೇಶವಾದ ಸಂಗತಿಯು ಗಮನಾರ್ಹವಾಗಿದೆ.

— — — —

# ಅಂದದ ಮೂಲ ಹೊಂದಿಕೆಯಲ್ಲಿ

ಅಂದ ಎನ್ನುವದೇನು ? ಅದು ಉಂಟಾಗುವುದು ಹೇಗೆ? ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅಂದವೆನ್ನುವುದೆಲ್ಲ ಉಂಟಾಗುವುದು ಹೊಂದಿಕೆಯಿಂದ. ಈ ಮಾತಿನ ಸಮರ್ಥನೆಗಾಗಿ ದೊರೆಯುವ ಉದಾಹರಣೆ ಒಂದೆರಡು ಮಾತ್ರವಲ್ಲ; ನೂರೊಂದು. ಅಷ್ಟೇ ಏಕೆ ? ಅಂದವಾದುದೆಲ್ಲ ಈ ಮಾತಿಗೆ ಬೆಂಬಲವನ್ನು ನೀಡುತ್ತದೆ. ಅನುಕೂಲತೆಗಾಗಿ ಒಂದೆರಡು ಉದಾಹರಣೆಗಳನ್ನು ಇಲ್ಲಿ ತೆಗೆದುಕೊಂಡರೆ ಸಾಕು.

ಉದಾಹರಣೆಗಾಗಿ ನಮ್ಮ ಮುಖವನ್ನೇ ನೋಡಿಕೊಳ್ಳಬಹುದು. ಹಣೆ, ಹುಬ್ಬು, ಕಣ್ಣು, ಮೂಗು, ತುಟಿ, ಗದ್ದ-ಇವು ಒಂದಕ್ಕೊಂದು ತಕ್ಕ ಪ್ರಮಾಣದಲ್ಲಿ ಹೊಂದಿಕೊಂಡರೆ ಅದುವೆ ಮುಖದ ಸೌಂದರ್ಯ. ಹಾಗೆಯೇ ಒಂದು ಹೂವಿನ ಚೆಲುವಿಗೆ ಅದರ ದಳದಳಗಳು ಹೊಂದಿಕೊಂಡಿರುವುದೇ ಕಾರಣವೆಂಬುದನ್ನು ತಿಳಿದುಕೊಳ್ಳಲು ಬಹಳ ಕಾಲ ಹಿಡಿಯಲಿಕ್ಕಿಲ್ಲ. ಒಂದುಬಳ್ಳಿ ಹೂ ತಳೆದು ಬಳುಕುವಾಗ ಬಗೆದು ನೋಡಬೇಕು; ಅದರಲ್ಲಿಯೂ ಎಲೆಗಳು, ಮೊಗ್ಗುಗಳು, ಹೂಗಳು ಇವೆಲ್ಲವುಗಳ ಬಣ್ಣ ಬಣ್ಣಗಳ ಹೊಂದಿಕೆಯ ಅಂದವೇ ನಮ್ಮ ಕಣ್ಮನಗಳನ್ನು ಸ್ವಾಗತಿಸುವುದು.

ಈ ಉದಾಹರಣೆಗಳಿಂದ ಅಂದವೆಂಬುದು ಕೇವಲ ರೂಪದಲ್ಲಿದ್ದು ನೇತ್ರಕ್ಕೆ ಮಾತ್ರ ಆನಂದವನ್ನುಂಟುಮಾಡುವಂತಹದು ಎಂಬ ಕಲ್ಪನೆಯಾಗುವ ಸಂಭವವುಂಟು. ಅಂದದ ಹರಹು ಬಹಳ ಹಿರಿದು. ಸೌಂದರ್ಯವೆಂಬುದು ಸೃಷ್ಟಿಯನ್ನೇ ತಬ್ಬಿ ನಿಂತಿದೆ. ಅದರ ಅನುಭವ ಎಲ್ಲ ಇಂದ್ರಿಯಗಳ ಮುಖಾಂತರವೂ ಆಗುವಂತಹದು; ರೂಪಸೌಂದರ್ಯವನ್ನು ಕಣ್ಣು ಕಂಡು ಹಿಡಿಯುವಂತೆ ರಾಗ ಸೌಂದರ್ಯವನ್ನು ಕಿವಿ ಅರಿತು ಆನಂದಿಸಬಹುದು. ಹಾಗಾದರೆ ರಾಗದಲ್ಲಿ ಇರುವ ಅಂದವೇನು ? ಸ್ವರಗಳ ಹೊಂದಿ

ಕೆಯಿಂದ ರಾಗ ಸೌಂದರ್ಯವುಂಟಾಗುತ್ತದೆ. ಸಪ್ತಸ್ವರಗಳಲ್ಲಿ ಒಂದು ಸ್ವರ ವನ್ನು ಕೊಂಚು ಹೆಚ್ಚು ಎಳೆದು ಇನ್ನೊಂದನ್ನು ಒಂದಿನಿತು ಕಡಿಮೆ ಎಳೆದು ಮೊಟಕು ಮಾಡಿಬಿಟ್ಟರೆ ರಾಗವೆಲ್ಲ ಕೆಟ್ಟುಹೋಗುವುದು. ಸ್ವರಗಳಿಂದ ರಾಗವುಂಟಾಗುವಂತೆ ವಿವಿಧ ವಾದ್ಯಗಳ ಸ್ವರವು ಕಂಠಸ್ವರದೊಡನೆ ಹೊಂದಿ ಕೆಯಾದಲ್ಲಿ ಸಂಗೀತವುಂಟಾಗುತ್ತದೆ, ' ರುಚಿ ' ಯ ವಿಷಯದಲ್ಲೂ ಇದೇ ಮಾತನ್ನು ಹೇಳಬೇಕಾಗುತ್ತದೆ: ರಸಗಳೆಲ್ಲ ತಕ್ಕ ಪ್ರಮಾಣದಲ್ಲಿ ಬೆರೆದಾಗ ನಾಲಿಗೆಯು ಅನುಭವಿಸುವ ರುಚಿ ಉಂಟಾಗುತ್ತದೆ. 'ಷಡ್ರಸಾನ್ನ ಭೋಜನ' ಎಂಬ ಮಾತನ್ನು ನಾವು ಮೇಲಿಂದ ಮೇಲೆ ಕೇಳುತ್ತೇವಷ್ಟೇ ? ಹುಳಿ, ಉಪ್ಪು ಮೊದಲಾದ ಎಲ್ಲ ರಸಗಳು ಒಂದುಗೂಡುವುದರಿಂದಲೇ ಅಡಿಗೆಗೆ ರುಚಿಯುಂಟಾಗುತ್ತದೆ.

ಚಿತ್ರಕಲೆಯ ರೇಖಾವಿನ್ಯಾಸದಲ್ಲಿ ಹಾಗು ವರ್ಣವಿನ್ಯಾಸದಲ್ಲಿ ಈ ಹೊಂದಿಕೆಯನ್ನೇ ನಾವು ಕಾಣುತ್ತೇವೆ. ಸಂಗೀತದಲ್ಲಿ ಸ್ವರ ವಿನ್ಯಾಸವನ್ನು ಗುರುತಿಸಬಹುದು. ಕಾವ್ಯದಲ್ಲಿ ರಸಭಾವಗಳ ವಿನ್ಯಾಸವನ್ನು ಕಂಡುಹಿಡಿ ಯಬಹುದು. ಕಾವ್ಯದ ಹೊರಮೈಯಾದ ಛಂದಸ್ಸಿಗೆ ಅದರಲ್ಲಿ ಹೊಂದಿಕೊಂಡ ಗಣಯೋಜನೆಯೇ ಪದಮೈತ್ರಿಗೆ ಕಾರಣ. ವಾಸ್ತುಶಿಲ್ಪ ಸೌಂದರ್ಯವುಂಟಾಗುವುದೂ ಕಣ್ಣಿಗೆ ಸಮಕಟ್ಟಾಗಿ ತೋರುವ ಹೊಂದಿಕೆ ಯಿಂದಲೇ.

ಅಂದವಾದ ಬಾಳಿನ ಅಥವಾ ಜೀವನ ಸೌಂದರ್ಯದ ರಹಸ್ಯವು ಕೂಡ ಹೊಂದಿಕೆಯಲ್ಲಿಯೇ ಉಂಟು. ಹೊರಬಾಳಿನಲ್ಲಿ ಅಂದ ನೆಲೆಗೊಳ್ಳ ಬೇಕಾದರೆ ಮೊದಲು ಒಳ ಬಾಳಿನಲ್ಲಿ ಅದು ನೆಲೆಗೊಳ್ಳಬೇಕು. ಅಂತರಂಗ ಸೌಂದರ್ಯಕ್ಕೆ ಅಂತರಂಗದಲ್ಲಿ ತರಂಗಗೊಳ್ಳುವ ಭಾವ ಭಾವನೆಗಳ ಹೊಂದಿಕೆ ಕಾರಣವಾಗುತ್ತದೆ. ಅನುರಾಗಗಳು ಯಾವಾಗಲೂ ಜತೆಗೂಡಿ ಹೋಗುವಂಥವುಗಳಾಗಿರುವುದಿಲ್ಲ; ಅದರಂತೆ ವಿಚಾರಗಳು. ಉದಾಹರಣೆ ಯನ್ನು ಕೊಡಬೇಕಾದರೆ ಸ್ವಾರ್ಥ ಹಾಗು ಪರಾರ್ಥಗಳಿಗೆ ಸಂಬಂಧಿಸಿದ ವಿಚಾರಗಳು ತಮ್ಮಷ್ಟಕ್ಕೆ ತಾವೇ ಹೊಂದಿಕೊಳ್ಳಲಾರವು. ಅದರಂತೆ ಪ್ರೀತಿ, ದ್ವೇಷ ಮೊದಲಾದ ಪರಸ್ಪರ ವಿರುದ್ಧ ಅನುರಾಗಗಳು ಅದೆಷ್ಟೋ ಸಲ

ಅಂತರಂಗದಲ್ಲಿ ಹುಯ್ಲುನ್ನೆಬ್ಬಿಸುವವು. ಅಂಥ ಸಮಯದಲ್ಲಿ ಮನವೆಂಬ ಮನೆಯ ಯಜಮಾನನಾದ ಆತ್ಮನು ಪರಸ್ಪರ ವಿರೋಧ ಭಾವವುಳ್ಳ ವಿಚಾರ ಗಳನ್ನೂ ಅನುರಾಗಗಳನ್ನೂ ಏಕಸೂತ್ರಕ್ಕೆ ತರಬೇಕಾಗುವುದು. ಹಾಗೆ ಏಕಸೂತ್ರಕ್ಕೆ ತಂದರೆ, ಎಂದರೆ ಅವುಗಳ ಹೊಂದಿಕೆಯನ್ನುಂಟು ಮಾಡಿದರೆ, ಸಮಚಿತ್ತವೆಂಬುದು ಸಾಧ್ಯವಾಗುತ್ತದೆ. ಈ ಸಮಚಿತ್ತವೇ ಅಂತರಂಗದ ಸೌಂದರ್ಯ. ಯಾವನೊಬ್ಬ ವ್ಯಕ್ತಿಯ ಜೀವನವು ಬಾಹ್ಯ ರಂಗದಲ್ಲಿ ಸುಂದರವಾಗಲು ಆ ವ್ಯಕ್ತಿಯು ಸಾಧಿಸಿದ ಅಂತರಂಗ ಸೌಂದರ್ಯವು ಕಾರಣವಾಗುತ್ತದೆ.

ವ್ಯಕ್ತಿಯ ವಿಷಯದಲ್ಲಿ ಹೇಳಿದ ಮಾತು ಸಮಾಜಕ್ಕೂ ರಾಷ್ಟ್ರಕ್ಕೂ ಅನ್ವಯಿಸುತ್ತದೆ. ಒಂದು ಸಮಾಜ ಸುಂದರವಾಗಬೇಕಾದರೆ ಆ ಸಮಾಜಗ ನರ ನಾಡಿಗಳಂತಿದ್ದ ವಿವಿಧ ಉದ್ಯೋಗದ ಜನರು ಶ್ರುತಿಗೂಡಿ ನುಡಿಯಬೇಕು; ಮತಿ ಬೆರಸಿ ದುಡಿಯಬೇಕು. ಸಮಾಜದ ಅಥವಾ ನಾಡಿನ ಪ್ರಗತಿಯನ್ನು ಅನುಲಕ್ಷಿಸಿ ಅದಕ್ಕೆ ಅನುಕೂಲವಾಗುವಂತೆ ಹೊಂದಿಕೊಂಡು ನಡೆಯಬೇಕು. ಆಗ ಆ ಸಮಾಜವು ಒಂದು ಸುಂದರ ಸಮಾಜವಾಗಿ ಏರ್ಪಡುತ್ತದೆ. ವ್ಯಕ್ತಿಗಳು ತಮ್ಮ ಒಳಬಾಳಿನಲ್ಲಿ ಮೊದಲು ಹೊಂದಿಕೆಯನ್ನು ಮಾಡಿ ಕೊಂಡರೆ ಸಮಾಜದಲ್ಲಿ ಆ ಹೊಂದಿಕೆಯನ್ನು ಸಾಧಿಸಲು ಸಮರ್ಥ ರಾಗುವರು.

ಎಲ್ಲಕ್ಕೂ ಮೊದಲು ನಾಡಿನ ನಾಯಕರೆಂದು ಎನ್ನಿಸಿಕೊಳ್ಳುವವರಲ್ಲಿ ಆಂತರಿಕ ಹೊಂದಿಕೆ ಅತ್ಯಾವಶ್ಯಕ. ತಮ್ಮೊಳಗೆ ಐಕ್ಯವನ್ನು ಸಾಧಿಸದವರು ತಮ್ಮ ಹೊರಗೆ ಐಕ್ಯವನ್ನು ಸಾಧಿಸಲರಿಯರು. ತನ್ನನ್ನು ಆಳಬಲ್ಲವನು ಜಗವನ್ನು ಆಳಬಲ್ಲನು ಎಂಬ ಮಾತು ರೂಢವಾದುದು ಈ ಕಾರಣದಿಂದಲೇ. ಹೊಂದಿಕೆಯನ್ನು ಸಾಧಿಸಬೇಕಾದರೆ ಒಂದು ಮಾತನ್ನು ಗಟ್ಟಿಯಾಗಿ ನೆನಪಿಡು ವುದು ಒಳಿತು. ಒಂದು ಹಿರಿಯ ಗುರಿಗೆ, ಕಿರಿಯ ಆಶೆ ಆಕಾಂಕ್ಷೆಗಳನ್ನೆಲ್ಲ ಒಳಪಡಿಸಬಲ್ಲವನು, ಒಂದು ಉನ್ನತವಾದ ಧ್ಯೇಯಕ್ಕಾಗಿ ಸಣ್ಣ ಸಣ್ಣ ಸ್ವಾರ್ಥಗಳನ್ನು ತೊರೆಯಬಲ್ಲವನು ತನ್ನೊಳಗೆ ಐಕ್ಯವನ್ನು ಸ್ಥಾಪಿಸಲು ಸಮರ್ಥನಾಗುವನು. ಇದಕ್ಕೆ ಒಂದು ಮಾರ್ಗವೂ ಉಂಟು. ಆತ್ಮಪ್ರೀತಿಮೆ

ಯೆಂಬ ಸಹಜಪ್ರವೃತ್ತಿಯನ್ನು ಮೊದಲಿನಿಂದಲೂ ಸಾಧನೆಯಿಂದ ಆತ್ಮ ಬಲವನ್ನಾಗಿ ಉದಾತ್ತಗೊಳಿಸಿಕೊಳ್ಳುವುದೇ ಆ ಮಾರ್ಗ. ಒಂದು ಉತ್ತಮ ವಾದ ಮನೆತನದಲ್ಲಿರುವ ಕಿರಿಯರೆಲ್ಲ ಆ ಮನೆತನದ ಗೌರವವನ್ನು ಗಮನಿಸಿ ನಡೆಯುವ ಮನೆಯೊಡೆಯನ ಇಚ್ಛೆಗೆ ತಮ್ಮ ತಮ್ಮ ಇಚ್ಛೆಗಳನ್ನು ಅನುಗೊಳಿಸಿ ನಡೆಯುಬಹುದಷ್ಟೇ? ಹಾಗೆ ಒಂದು ಮನದೊಳಗಿನ ಪ್ರವೃತ್ತಿಗಳೆಲ್ಲ ಮನದ ಅಧಿನಾಯಕನಾದ ಆತ್ಮನಿಗೆ ಹೊಂದಿಕೊಂಡು ಹೋಗಬಹುದು; ಹೊಂದಿ ಕೊಂಡು ಹೋಗಬೇಕು. ಆಗ ಮಾತ್ರ ಅಂತರಂಗದ ಐಕ್ಯ ಕೇವಲ ಕನಸಾಗಿ ಉಳಿಯದೆ ನನಸಾಗಿ ನೆಲೆಗೊಳ್ಳುವುದು.

ಮನೆ ಒಂದು ಚಿಕ್ಕ ಸಮಾಜ. ಆ ಚಿಕ್ಕ ಸಮಾಜ ವ್ಯಕ್ತಿಗಳಲ್ಲಿ ಆಂತರಿಕ ಹೊಂದಿಕೆಯಿದ್ದರೆ ಮಾತ್ರ ಬಹಿರಂಗದಲ್ಲಿ ಹೊಂದಿಕೆ ತಾನಾಗಿಯೇ ಏರ್ಪಡುತ್ತದೆ. ಅನಾವಶ್ಯಕವಾದ ಮನಸ್ತಾಪ, ಅಸೂಯೆ, ದುಗುಡ, ದುಮ್ಮಾನಗಳಿಗೆ ಅಂಥ ಮನೆಯಲ್ಲಿ ಎಡೆಯೇ ಉಳಿಯುವುದಿಲ್ಲ. ಆದುದರಿಂದ ಆ ಮನೆ ಅಂದಪಡುತ್ತದೆ; ಹಾಗೆಯೇ ಸಾಮಾಜಿಕ ಹಾಗು ರಾಷ್ಟ್ರೀಯ ಉನ್ನತಿಯನ್ನು ಸಾಧಿಸಲು ಸ್ಥಾಪಿತವಾದ ಸಂಘ ಸಂಸ್ಥೆಗಳ ಸದಸ್ಯರು ಆ ಸಂಘಸಂಸ್ಥೆಗಳ ಬೆಳವಣಿಗೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ವೈಯಕ್ತಿಕ ವೈಲಕ್ಷಣಗಳನ್ನೆಲ್ಲ ಬದಿಗಿಟ್ಟು ಭಾವ ಸಾಮರಸ್ಯದೊಡನೆ ಕಾರ್ಯಮಾಡಿ ದರೆ ಆ ಸಂಘ ಸಂಸ್ಥೆಗಳು ಸುಂದರವಾಗುವುವಲ್ಲದೆ ಭದ್ರವೂ ಆಗುತ್ತವೆ.

ಒಳ್ಳೆಯ ನಾಯಕರಾಗುವ ಗುಣವಿಲ್ಲದಿದ್ದರೆ ಅಡ್ಡಿಯಿಲ್ಲ; ಒಳ್ಳೆಯ ಅನು ಯಾಯಿಯಾಗುವ ಗುಣವನ್ನಾದರೂ ಅಳವಡಿಸಿಕೊಳ್ಳಬೇಕು. ಈ ಗುಣ ವನ್ನು ಅಳವಡಿಸಿಕೊಳ್ಳುವುದು ಸುಲಭ ಸಾಧ್ಯ. ಬೆಳವಣಿಗೆಯ ಸ್ಥಲದಲ್ಲಿ ಸಮದೃಷ್ಟಿಯುಳ್ಳ ಹಿರಿಯರ ಸರಿಯಾದಮಾರ್ಗದರ್ಶನ ದೊರೆತರೆ ನೆರೆಹೊರೆ ಯವರೊಡನೆ ಹೊಂದಿಕೊಂಡು ಹೋಗುವಗುಣ ಅಳವಡುವುದರಲ್ಲಿ ಸಂದೇ ಹ ವಿಲ್ಲ. ರಾಷ್ಟ್ರೋನ್ನತಿಯ ಕಾರ್ಯಕ್ರಮಗಳಿಗಾಗಿ ಜನತೆಯನ್ನು ತಮ್ಮ ಸದ ಭಿಪ್ರಾಯಕ್ಕೆ ಹೊಂದಿಕೊಳ್ಳುವ ಗುಣ ನಾಯಕರಲ್ಲಿ ಹೇಗೆಬೇಕೋ ಹಾಗೆ ಆ ಕಾರ್ಯಕ್ರಮಗಳು ನೈಜಕ್ಕೆ ತಿರುಗಬೇಕಾದರೆ ಅನುಯಾಯಿಗಳು ನಿಜ ವಾದ ನಾಯಕರೊಡನೆ ಹೊಂದಿಕೊಂಡು ಹೋಗುವುದೂ ಆವಶ್ಯಕ. ಅಂತೂ ಜೀವನ-ಸೌಂದರ್ಯವುಂಟಾಗುವುದು ಹೊಂದಿಕೆಯಿಂದ.

# ನಿಟ್ಟು ಎರಡು

## ಪ್ರಕೃತಿ

# ಪ್ರಕೃತಿಯ ತೊಟ್ಟಿಲಲ್ಲಿ

ಜನಕ ರಾಜನ ಮಗಳು ವನಕ ತೊಟ್ಟಿಲಕಟ್ಟಿ
ಕುಶ ಲವರನ್ನು ತೂಗ್ಯಾಳೋ

—ಜಾನಪದ ಗೀತೆ

## ಪ್ರಕೃತಿಯ ಕಲ್ಪನೆ:

ಪ್ರಕೃತಿ ಎಂದರೆ ಪ್ರಕೃತಿ; ವಿಕೃತಿಯಲ್ಲ; ಮಾನವನ ಕೃತಿಯೂ ಅಲ್ಲ. ಹೇಗೋ ಸೃಷ್ಟಿಯಾಗಿ ಮಾನವನ ಸುತ್ತ, ಮೇಲೆ ಕೆಳಗೆ ವಿಶ್ವದಲ್ಲಿ ತಾನೇ ತಾನಾಗಿ ಎಲ್ಲೆಲ್ಲಿಯೂ ಹರಡಿ ನಿಂತುದೆಲ್ಲವೂ ಪ್ರಕೃತಿ. ಅದು ಯಾರಿಂದ, ಹೇಗೆ, ಯಾವಾಗ ಏತಕ್ಕಾಗಿ ರೂಪುಗೊಂಡಿತೆಂಬುದನ್ನು ಊಹಿಸುವುದು ಕಷ್ಟ. ಮೇಲಾಗಿ ಅದು ಇಲ್ಲಿ ನಮಗೆ ಪ್ರಕೃತವಾದ ವಿಷಯವೂ ಅಲ್ಲ. ನೆಲ, ಜಲ, ಮುಗಿಲು,ಗಾಳಿ-ಇವೆಲ್ಲ ಪ್ರಕೃತಿಯಲ್ಲಿ ಸಮಾವೇಶವಾಗುತ್ತವೆ. ಅಲ್ಲದೆ ನೆಲದಲ್ಲಿ ಚಿಗಿತು ಹಬ್ಬಿ ಹರಡುವ ತರುಲತೆಗಳು, ಜಲದಲ್ಲಿ ಚಲಿಸುವ ಜೀವ ರಾಶಿ, ಗಾಳಿಯಲ್ಲಿ ಉಸುರಾಡಿಸುವ ಜೀವಕೋಟಿ, ಮುಗಿಲಲ್ಲಿ ಮೂಡಿ ಮುಳುಗುವಂತೆ ತೋರುವ ಗ್ರಹತಾರೆಗಳು—ಎಲ್ಲವೂ ಪ್ರಕೃತಿಯಲ್ಲಿ ಅಡಕವಾಗಿ ಪ್ರಕೃತಿಯ ಲೀಲಾವಿಲಾಸವನ್ನೇ ಎತ್ತಿ ತೋರುತ್ತವೆ. ಸಂಸ್ಕೃತಿಯನ್ನೋ, ವಿಕೃತಿಯನ್ನೋ ತಾಳದ ಒಂದು ಸಹಜ ಅವಸ್ಥೆಯಲ್ಲಿರುವ ಮಾನವನು ಕೂಡ ಪ್ರಕೃತಿಯ ಒಂದು ಅಂಗ.

ಮಾನವನ ಸುತ್ತ, ಮೇಲೆ, ಕೆಳಗೆ-ಹೀಗೆ ಅನಂತವಾಗಿ ಹರಡಿ ನಿಂತ ಪ್ರಕೃತಿಯು ಮಾನವನ ಮನದ ಮೇಲೆ ಪರಿಣಾಮವನ್ನು ಮಾಡುವಂತಹದಾಗಿದೆ; ಉದಾಹರಣೆಗಾಗಿ ಮುಗಿಲಿನಲ್ಲಿ ತೇಲುವ ಮೋಡ, ಮೋಡದಿಂದ ಇಳಿಯುವ ಮಳೆ, ಮಳೆಯ ಪರಿಣಾಮವಾಗಿ ಹರಿಯುವ ಜಲ, ಜಲಕ್ಕೆ ಚಿಗಿಯುವ ಬಳ್ಳಿ, ಬಳ್ಳಿಗೆ ಮೂಡಿ ಅರಳುವ ಹೂವು, ಹೂವಿನಿಂದ

ಹರಡುವ ಗಂಧ-ಇವೆಲ್ಲವೂ ಮಾನವನ ಬಗೆಯನ್ನು ಸೆಳೆಯುವವೆಂಬುದನ್ನು ಅರಿಯದವರಾರು ?

## ಪ್ರಕೃತಿಯ ಲಕ್ಷಣಗಳು:

ಪ್ರಕೃತಿ ಜಡವಾದುದಲ್ಲ; ಚೈತನ್ಯಮಯವಾದುದೆಂಬುದನ್ನು ಈ ಉದಾಹರಣೆಯಿಂದ ಅರಿಯಬಹುದು. ಪ್ರಕೃತಿಯನ್ನು ಸ್ತ್ರೀಗೆ ಹೋಲಿಸುವುದರಲ್ಲಿ ಔಚಿತ್ಯವಿದೆ; ಪ್ರಕೃತಿ ಚೈತನ್ಯಮಯಿ ಮಾತ್ರವಲ್ಲ; ಚೈತನ್ಯದಾಯಿನಿಯು ಕೂಡ. ನಮ್ಮ ತ್ರಿಕರಣಗಳ ಮೇಲೆ ಪ್ರಕೃತಿ ಸದಾ ಮಾಡುತ್ತಿರುವ ಪರಿಣಾಮವೇ ಇದಕ್ಕೆ ಸಾಕ್ಷಿ. ಬೇಸಗೆಯ ಹಗಲು ಕಳೆದು ಸಂಜೆಯಲ್ಲಿ ತಂಗಾಳಿ ಸೂಸಿದಾಗ ಅದರ ಸೋಂಕು ಮೈಗೆ ಅದೆಷ್ಟು ಹಿತ ! ಆ ತಂಪು ಮೈಗೆ ಮಾತ್ರವಲ್ಲ; ಮನಸ್ಸಿಗೂ ಸೂಸಿ ಬರುವುದೆಂಬುದಕ್ಕೆ ನಮ್ಮ ಅನುಭವವೇ ಸಾಕ್ಷಿ.

ಚೈತನ್ಯ ಅಥವಾ ಚಲನೆ ಪ್ರಕೃತಿಯ ಲಕ್ಷಣವಾಗಿದ್ದಂತೆ ವೈವಿಧ್ಯವೂ ಪ್ರಕೃತಿಯ ಒಂದು ಲಕ್ಷಣ. ಪ್ರಕೃತಿಯ ಋತು ಋತುಗಳ ಗತಿಯಲ್ಲಿ ವಿಧ ವಿಧದ ರೂಪಲಾವಣ್ಯವನ್ನು ತಳೆಯುತ್ತದೆ. ವಸಂತ ಋತುವಿನಲ್ಲಿ ತರುಲತೆಗಳು ತೋರುವ ನೋಟವೇ ಬೇರೆ, ಚಳಿಗಾಲದಲ್ಲಿ ಅವು ತಳೆಯುವ ರೂಪವೇ ಬೇರೆ. ನೆಲವೊಂದೇ ಜಲವೊಂದೇ ಮುಗಿಲೊಂದೇ ಆದರೂ ಮುಂಜಾವಿನಲ್ಲಿ ಅವು ತೋರುವ ಲೀಲೆಯೇ ಬೇರೆ, ಸಂಜೆಯ ಸಮಯದಲ್ಲಿ ಅವು ಪ್ರದರ್ಶಿಸುವ ದೃಶ್ಯವೇ ಬೇರೆ. ಮಳೆಗಾಲದಲ್ಲಿ ಮುಗಿಲನ್ನು ನೋಡಬೇಕು; ಮೋಡಗಳು ಆಡುವ ಆಟದಿಂದಾಗಿ ಕ್ಷಣ ಕ್ಷಣಕ್ಕು ಮುಗಿಲು ಬಗೆ ಬಗೆಯ ನೋಟಗಳನ್ನು ಕಣ್ಣಿಗೆತ್ತಿ ಹಿಡಿಯುತ್ತದೆ. “ ಕ್ಷಣೇ ಕ್ಷಣೇಯನ್ನವತಾಮುಪೈತಿ ತದೇವ ರೂಪಂ ರಮಣೀಯತಾಃ ”—ಎಂದು ರಮಣೀಯತೆಯ ವ್ಯಾಖ್ಯೆಯನ್ನು ಬಲ್ಲವರು ಸರಿಯಾಗಿ ಹೇಳಿದ್ದಾರೆ. ಪ್ರಕೃತಿ ಚಣ ಚಣಕ್ಕೆ ಈ ರೀತಿಯಾಗಿ ಹೊಸ ಹೊಸತನವನ್ನು ತಳೆಯುವುದರಿಂದಲೇ ಅದರ ಚೆಲುವು ಚಿತ್ತವನ್ನು ಸೂರೆಗೊಳ್ಳುತ್ತದೆ.

ಪರಿ ಪರಿಯ ರೂಪಕಾಂತಿಗಳ ಕಣ್ಣಾಗಿಸುವ
ಪರಿ ಪರಿಯ ಫಲ ಮಧುರಗಳ ರಸನೆಗುಣಿಪ
ಪರಿ ಪರಿಯ ಕಂಠರವಗಳ ಕಿವಿಗೆ ಸೋಂಕಿಸುವ
ಗುರು ಸೃಷ್ಟಿ ರಸಿಕತೆಗೆ-ಮಂಕುತಿಮ್ಮ

—ಎಂದು ಡಿ. ವ್ಹಿ. ಜಿ ಅವರು ಹೇಳಿದುದು ಯಥಾರ್ಥವಾಗಿದೆ.

ಈ ವೈವಿಧ್ಯದ ಬಳಿವಿಡಿದು ಬರುವ ಸೌಂದರ್ಯವೂ ಪ್ರಕೃತಿಯ ಇನ್ನೊಂದು ಲಕ್ಷಣ. ಬರಿ ತರುಲತೆಗಳನ್ನು ಗಮನಕ್ಕೆ ತೆಗೆದುಕೊಂಡರೂ ಅವುಗಳಲ್ಲಿ ತೋರಿ ಬರುವ ರೂಪವೈವಿಧ್ಯ ಇಷ್ಟೇ ಎಂದು ಹೇಳಲು ಸಾಧ್ಯವೇ? ಎಷ್ಟು ಬಗೆಯ ಎಲೆ, ಹೂವು, ಕಾಯಿ, ಹಣ್ಣು ! ಅವುಗಳಿಗೆ ಅದೆಷ್ಟು ಬಗೆಯ ಬಣ್ಣಗಳು! ಅವುಗಳ ಗಂಧವೂ ಅಷ್ಟೇ ವಿವಿಧ. ಗಂಧ ವಿವಿಧವಾಗಿರುವಂತೆ ಅವುಗಳ ರಸವೂ ವಿವಿಧವಾದುದು. ಪಂಚೇಂದ್ರಿಯಗಳನ್ನೆಲ್ಲ ಪ್ರಕೃತಿ ಸೂರೆಗೊಳ್ಳಬಲ್ಲದು. ಆದರೆ ಪ್ರಕೃತಿ ಮಾನವನ ಮನವನ್ನು ಮುಗ್ಧಗೊಳಿಸುವುದು ಪ್ರಾಮುಖ್ಯವಾಗಿ ತನ್ನ ರೂಪಸೌಂದರ್ಯವನ್ನು ಕಣ್ಣಿಗೆ ಬೀರುವುದರಿಂದಾಗಿ.

## ಪ್ರಕೃತಿ ಸೌಂದರ್ಯವತಿ, ಗಂಧವತಿ, ರಸವತಿ:

ಪ್ರಕೃತಿ ರಸವಂತಿಯಾಗಿರುವುದರಿಂದಲೇ ರಸಿಕರಿಗೆ ರಸಪೋಷಣೆಯನ್ನು ಮಾಡಬಲ್ಲಳು. ಪ್ರಕೃತಿಯ ಸಂಪರ್ಕದಿಂದಲ್ಲದೆ ಪುರುಷ ರಸಿಕನಾಗಲಾರ. ಪ್ರಕೃತಿ ತನ್ನ ರೂಪ ರಾಗ ರಸಗಳಿಂದ ರಸಿಕರಿಗೆ ಹಾಗು ಕಲಾವಿದರಿಗೆ ಪ್ರೇರಣೆಯನ್ನು ಪೂರೈಸುತ್ತ ಬಂದಿದೆ. ಚಂದ್ರೋದಯಕ್ಕೆ ಮಾರು ಹೋಗದ ರಸಿಕನಾವ ನಾಡಿನಲ್ಲಿದ್ದಾನೆ ? ಕಂದ ರಾಮಚಂದ್ರ ಚಂದ್ರನನ್ನು ಬೇಡಿ ಅತ್ತ ಕಥೆಯಲ್ಲಿ ಎಲ್ಲ ಕಂದಮ್ಮಗಳ ಕಥೆ ಇದೆ. ಕಾಮನ ಬಿಲ್ಲನು, ಕಂಡು ಮೂಕ ವಿಸ್ಮಿತರಾಗದವರು ಯಾರು ? ಚೆಲು ಗುಲಾಬಿ ಕಂಟಿಯಲ್ಲಿ ಗಾಳಿಗೆ ಅಲ್ಲಾಡಿ ತನ್ನ ರೂಪಲಾವಣ್ಯವನ್ನು ಬೀರಿದಾಗ ಕೂಸು ಸಹ ಕೈ ಚಾಚುವುದು ಅದರ ಚೆಲುವಿಗೊಲಿದು.

ಕವಿಗಳಾಗಲಿ ಕಲಾವಿದರಾಗಲಿ ಸ್ಫೂರ್ತಿಯನ್ನು ಪಡೆಯುವುದು ಪ್ರಾಯಶಃ ಪ್ರಕೃತಿ ಸೌಂದರ್ಯದ ಸನ್ನಿವೇಶದಲ್ಲಿ. ನೆಲ ಜಲಗಳ ಚೆಲುವು

ನೋಟಗಳನ್ನು ಚಿತ್ರಿಸಿದ ಚಿತ್ರಶಿಲ್ಪಿಗಳುಂಟೇ ? ಋತು ಋತುಗಳು ತಳೆಯುವ ಗತಿಯನ್ನು ಕಂಡು ಸಂಪ್ರೀತರಾಗಿ ಗೀತಗಳನ್ನು ರಚಿಸದ ರಸ ಋಷಿಗಳುಂಟೇ ? ಅಂತೂ ಎಲ್ಲ ದೇಶಗಳ ಎಲ್ಲ ಯುಗಗಳ ಕಲಾವಿದರು ಒಂದಿಲ್ಲ ಒಂದು ಮಾಧ್ಯಮದಲ್ಲಿ ಪ್ರಕೃತಿ ಸೌಂದರ್ಯವನ್ನು ಪ್ರತಿಬಿಂಬಿ ಸುತ್ತ ಬಂದಿದ್ದಾರೆ. ನಿಸರ್ಗದ ಸುಂದರ ಸನ್ನಿವೇಶಗಳ ಸಂಪರ್ಕದಿಂದ ಹೊಮ್ಮಿದ ಸ್ಫೂರ್ತಿ ಕಲೆಯ ಬಲೆಯನ್ನು ರಚಿಸಲು ಕಾರಣವಾಗುತ್ತದೆ.

## ಪ್ರಕೃತಿಯಲ್ಲಿ ಪರಮಾತ್ಮ :

ಪ್ರಕೃತಿಯಲ್ಲಿ ಪರಮಾತ್ಮನನ್ನು ಕಂಡ ಕಲಾವಿದರೂ ಉಂಟು. ಪ್ರಕೃತಿಯಲ್ಲಿ ರೂಪತೋರಿದ ಪರಮಾತ್ಮನಿಗೆ ಅವರು ತಮ್ಮ ಕಲೆಯ ಆರತಿಯನ್ನು ಬೆಳಗಿದುದುಂಟು. 'ಸೂರ್ಯೋದಯ ಚಂದ್ರೋದಯ' ಅವರಿಗೆ 'ದೇವರ ದಯ'. ನಿಸರ್ಗದ ಅನಂತ ಸೌಂದರ್ಯದಲ್ಲಿ ಅಡಗಿದ ಪರಮಾತ್ಮನ ದರ್ಶನಕ್ಕೆ ಹಾರೈಸಿ

ಬಾ, ಬಾ ದೊರೆ, ಬಾಗಿಲ ತೆರೆ
ಸುಮ್ಮನಿರುವರೇ
ಮೂಡುದೆಸೆಯ ಮುಗುಳುನಗೆ
ಬಿರಿಯೆ ಮೆಲ್ಲ ಮೆಲ್ಲಗೆ
ಅರುಣ ಕಿರಣ ಸರಣಿಯಲಿ
ಬಾ ಬಾ ದೊರೆ ಬಾಗಿಲ ತೆರೆ
ಸುಮ್ಮ ನಿರುವರೇ

ಎಂದು ಮೊದಲಾಗಿ ಕವಿಗಳು ಅವನನ್ನು ಕರೆದಿದ್ದಾರೆ.

ಶಿವನೇ ತನ್ನ ಗಂಡನೆಂದು ಬಗೆದು ಅವನನ್ನು ಒಲಿಸಿದ ಅನುಭಾವ ಕವಯಿತ್ರಿಯಾದ ಮಹಾದೇವಿಯಕ್ಕನವರು

"ಅಳಿ ಸಂಕುಳವೇ, ಮಾಮರವೇ, ಬೆಳದಿಂಗಳೇ, ಕೋಗಿಲೆಯೇ ನಿಮ್ಮ ನಿಮ್ಮೆನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚೆನ್ನಮಲ್ಲಿ-ಕಾರ್ಜುನದೇವರ ಕಂಡರೆ ಕರೆದು ತೋರಿರೇ" ಎಂದೂ

"ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ, ನೀವು ಕಾಣಿರೆ? ಕೊಳನ ತಡಿಯೊಳಗಾಡುವ ಹಂಸೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಗಿರಿಗಹ್ವರದೊಳಗಾಡುವ ನವಿಲುಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಚೆನ್ನಮಲ್ಲಿಕಾರ್ಜುನನೆಲ್ಲಿದ್ದಹನೆಂದು ನೀವು ಹೇಳಿರೆ, ನೀವು ಹೇಳಿರೆ."

ಎಂದೂ ಪರಮಾತ್ಮನನ್ನು ಪ್ರಕೃತಿಯ ಆವರಣದಲ್ಲಿಯೇ ಅರಸಿ

"ವನವೆಲ್ಲ ನೀವೆ. ವನದೊಳಗಣ ತರುವೆಲ್ಲ ನೀವೆ.
ತರುವಿನೊಳಗಾಡುವ ಖಗಮೃಗವೆಲ್ಲ ನೀವೆ.
ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ"

ಎಂದು ಪರಮಾತ್ಮನ ದರ್ಶನವನ್ನು ಪ್ರಕೃತಿಯ ಪ್ರಾಂಗಣದಲ್ಲಿಯೇ ಪಡೆದಿದ್ದಾರೆ.

ವ್ಯಾಪಕ ದೃಷ್ಟಿಯಲ್ಲಿ ವಿಶ್ವವೆಲ್ಲ ಒಂದು ದಿವ್ಯ, ಭವ್ಯ ಶರೀರ. ಪ್ರಕೃತಿ ಅದರ ಅಂಗಾಂಗಗಳಲ್ಲಿ ಹೊಮ್ಮುವ ಚೈತನ್ಯ. ಆ ಚೈತನ್ಯವನ್ನೇ ಭಾರತೀಯರು ಶಕ್ತಿಯೆಂದೋ ಶಿವೆಯೆಂದೋ ಆರಾಧಿಸುತ್ತ ಬಂದಿದ್ದಾರೆ. ಆ ಶಕ್ತಿಯ ಹಿಂದೆ ಸರ್ವಶ್ರೇಷ್ಠವಾದ ಯಾವುದೋ ಒಂದು ಭವ್ಯತೆ ದಿವ್ಯತೆ ರಹಸ್ಯವಾಗಿದ್ದು ಚೈತನ್ಯರೂಪಧಾರಿಣಿಯಾದ ಪ್ರಕೃತಿಯನ್ನು ಕುಣಿಸುತ್ತಿರಬೇಕು ಎಂಬ ಕಲ್ಪನೆ ದೃಷ್ಟಾರರಿಗೆ ಹೊಳೆಯದೆ ಇರಲಿಲ್ಲ. ಕವಿ ಚಾಮರಸನು 'ಮಾಯೆ' 'ಪ್ರಭು' ಎಂಬ ಪರಿಭಾಷೆಯಲ್ಲಿ ತನ್ನ ಅಮೋಘ ಕಾವ್ಯವಾದ ಪ್ರಭುಲಿಂಗಲೀಲೆಯಲ್ಲಿ ಈ ಎರಡೂ ದಿವ್ಯತೆಗಳ ಸ್ವರೂಪ ದರ್ಶನವನ್ನು ಮಾಡಿಸಿದ್ದಾನೆ. ಅವನ ಆ ಇಡಿಯ ಕಾವ್ಯವೇ ಈ ಘನವಾದ ತತ್ವ ಚಿತ್ರಣಕ್ಕೆ ಮೀಸಲಾಗಿದ್ದರೂ ಅದರ ಒಂದು ಪದ್ಯವು ಈ ರಹಸ್ಯವನ್ನು ಅತ್ಯಂತ ಹೃದ್ಯವಾಗಿ ಎತ್ತಿ ತೋರುತ್ತದೆ.

ಹೂಡಿ ಹಣ್ಣಿದ ಜಗದ ಜಂತ್ರವ
ನಾಡಿಸುವ ಮಾಯಾಂಗನೆಯು ತಾ
ನಾಡಿಸುವೆನೆಂಬುದನು ಪ್ರತ್ಯಕ್ಷದಲಿ ತೋರ್ಪಂತೆ
ಆಡಿಸುವ ಮದ್ದಳೆಯು ಜೋಕೆಯು
ಜೋಡಿಸುವನಲ್ಲಮನು ಪಾತ್ರವ
ನಾಡುವವಳಾ ಮಾಯೆ ಲೋಕವ ಮರುಳು ಮಾಡುತಲಿ

ಪ್ರಕೃತಿ ರಮ್ಯರೂಪವನ್ನು ತೋರಿಸಿದಂತೆ ರುದ್ರ ರೂಪವನ್ನೂ ತೋರಿಸುವುದುಂಟು. ಬಹಳ ಎತ್ತರದಿಂದ ಕೊಳ್ಳದಲ್ಲಿ ಧುಮ್ಮಿಕ್ಕುವ ಜಲಪಾತ, ಘೋರ್ಗರೆಯುವ ಕಡಲು, ಗಿಡಗಳನ್ನು ಬೇರು ಸಹಿತ ಕಿತ್ತಿಹಾಕುವ ಬಿರುಗಾಳಿ, ಅಬ್ಬರದ ಗುಡುಗು ಸಿಡಿಲು ಮಿಂಚು; ನೆಲ ಮುಗಿಲುಗಳನ್ನು ಒಂದೇ ಮಾಡುವಂತೆ ಬೀಳುವ ಮಳೆ,-ಇವು ಪ್ರಕೃತಿಯ ರುದ್ರ ಸ್ವರೂಪವನ್ನು ಎತ್ತಿ ತೋರುತ್ತವೆ. ಪ್ರಶಾಂತ ರಾತ್ರಿಯಲ್ಲಿ ಮೂಡಿ ಬರುವ ಚಂದ್ರ, ಮುಗಿಲು ತನ್ನ ಕಣ್ಣೆವೆ ಅದೇ ಬಿಚ್ಚಿ ನೋಡುವಂತಿರುವ ಉಷಃಕಾಲ, ಸುತ್ತಲಿನ ತರುಲತೆಗಳನ್ನು ತನ್ನ ಎದೆಯಲ್ಲಿ ಪಡಿಮೂಡಿಸುವ ತಂಗೊಳ,— ಇವೇ ಮೊದಲಾದ ನೋಟಗಳಲ್ಲಿ ಪ್ರಕೃತಿಯ ಪ್ರಶಾಂತ ಭಾವವನ್ನು ಕಾಣಬಹುದು. ಆದರೆ ಪ್ರಕೃತಿ ಸಾಮಾನ್ಯವಾಗಿ ಸೌಮ್ಯ ಶಾಂತ ಸರ್ವಮಂಗಳೆಯ ರೂಪದಲ್ಲಿಯೇ ಇರುತ್ತಾಳೆ. ಯಾವಾಗಲೋ ಒಮ್ಮೆ ರುದ್ರಕಾಳಿಯ ರೂಪವನ್ನು ತಾಳಬಹುದು. ಅಷ್ಟೆ.

"ನಾರಿ ಪರರುಪಕಾರಿ ನಾರಿ ಸ್ವರ್ಗಕೆ ದಾರಿ
ನಾರಿ ಜಗಕೆಲ್ಲ ಹಿತಕಾರಿ ಮುನಿದರೆ
ನಾರಿಯೇ ಮಾರಿ"

ಎಂದು ಸರ್ವಜ್ಞ ಹೇಳಿದ ಮಾತು ಪ್ರಕೃತಿಗೆ ಅನ್ವಯಿಸುತ್ತದೆ.

ಭಾರತದ ರಸಋಷಿಗಳು ಎಂದಿನಿಂದಲೂ ದೇವ ದೇವನನ್ನು ನಿಸರ್ಗದ ಆವರಣದಲ್ಲಿ ಸಂದರ್ಶಿಸುತ್ತ ಬಂದಿದಾರೆ. ಅದೇ ದಾರಿ ಹಿಡಿದು ಭಾರತೀಯ ಕಲಾವಿದರು ನಿಸರ್ಗದ ರುದ್ರರಮಣೀಯ ಹಾಗು ಶಾಂತರಮ್ಯ ದೃಶ್ಯಗಳಲ್ಲಿ ಅವನನ್ನು ಕಂಡು ಆ ಎರಡೂ 'ಚಿತ್ತಲಹರಿ' ಗಳಲ್ಲಿ ಆತನನ್ನು ಚಿತ್ರಿಸಿದ್ದಾರೆ.

ಪರಮಾತ್ಮನ ರುದ್ರ ರಮಣೀಯ ರೂಪದ ಕಲ್ಪನೆಯು ಅವರಿಗೆ

ಮುಂಗಾರಿನ ಮೊದಲಲ್ಲಿ ಮುಗಿಲು ತಾಳುವ ರೂಪದಿಂದ ಸ್ಫುರಿಸಿರಲು ಸಾಕು. ಆಕಾಶದಷ್ಟು ಅನಂತವಾದುದಿನ್ನಾವುದು ? ಅದುವೇ ಪರಮಾತ್ಮನ ಶರೀರ. ಆಕಾಶದ ನೇತ್ತಿಗೇರಿದ ಮುಗಿಲೊಡ್ಡೇ ಅವನ ಕೆದರಿದ ಜಡೆ, ಆಗ ಥಳಿಸುವ ಕುಡು ಕಾರ್ಮಿಂಚೇ ನಾಗಭೂಷಣನ ಕರ್ಣಾಭರಣ. ಕಾರ್ಮೋಡದಿಂದಿಳಿಯುವ ಮಳೆಯೇ ಗಂಗಾಧರನ ಜಡೆಯಿಂದಿಳಿವ ಗಂಗಾಸ್ರೋತ. ಜಟಾ ಜೂಟನ ಮುಗಿಲು-ಜಡೆ ಸಡಿಲಿದಾಗ ತೋರ ಬಹುದಾದ ಚಂದ್ರನೇ, ಶಶಿಧರನು ಜಡೆಯಲ್ಲಿ ಮುಡಿದ ಚಂದ್ರ. ಇನ್ನೇನು ಬೇಕು ಚಿತ್ರ ಪೂರ್ಣವಾಗುವುದಕ್ಕೆ ? ಆಕಾಶದ ವರ್ಣ ನೀಲ ವರ್ಣ. ಸರಿ, ಚಿತ್ರಕ್ಕೆ ಬೇಕಾದುದೆಲ್ಲ ಕೂಡಿತಷ್ಟೇ ? ಈ ಭವ್ಯ ದಿವ್ಯ ಕಲ್ಪನೆ ಕಾರಣವಾಯಿತು ಭಾರತದ ಕಲಾವಿದರು ಶಂಕರನ ಚಿತ್ರವನ್ನು ಬರೆಯು ವುದಕ್ಕೆ. ವಿಷ್ಣುವನ್ನು ಹಾಗೂ ವಿಷ್ಣುವಿನ ಅವತಾರವಾದ ರಾಮಚಂದ್ರ ದೇವ ರನ್ನು ನೀಲವರ್ಣದಲ್ಲಿ ರೂಪಿಸುವ ಸಂಗತಿಯನ್ನೂ ವಿಷ್ಣುವನ್ನು ಘನಶ್ಯಾಮ ನೆಂದು ಕರೆಯುವ ಸಂಪ್ರದಾಯವನ್ನೂ ಈ ಸಂದರ್ಭದಲ್ಲಿ ಗಮನಿಸಬೇಕು.

ಭೂಮಿ ತಾಯಿ, ಆಕಾಶ ತಂದೆ ಎಂಬ ಕಲ್ಪನೆಗಳೂ ಪ್ರಕೃತಿ ಆರಾಧನೆ ಯನ್ನೇ ಸೂಚಿಸುತ್ತವೆ. ಭೂಮಿ ನಿತ್ಯವೂ ಮಾನವನಿಗೆ ಒದಗಿಸುವ ಆಹಾರವನ್ನು ಗಮನಿಸಿದರೆ ಸಾಕು ಪ್ರಕೃತಿಯನ್ನು ತನ್ನ ತಾಯಿಯೆಂದು ಆತನು ಭಾವಿಸುವ ಬಗೆಗೆ ಸ್ಪಷ್ಟೀಕರಣ ದೊರೆಯುವುದು: ಎಷ್ಟೊಂದು ಧಾನ್ಯಗಳನ್ನು ಎಷ್ಟೊಂದು ಫಲಗಳನ್ನು ದೇವತಾ ಪೃಥವಿ ಒದಗಿಸುತ್ತಾಳೆ; ಎಷ್ಟೊಂದು ರಸಗಳನ್ನು ಪ್ರಕೃತಿಮಾತೆ ಪಾನ ಮಾಡಿಸುತ್ತಾಳೆ ! ಕನ್ನಡ ಕವಿಯೊಬ್ಬನು ಕನ್ನಡನಾಡನ್ನು ಕುರಿತು ಬರೆದ ಪದ್ಯ ಇಡಿಯ ಭೂಮಿಗೆ ಅನ್ವಯಿಸುತ್ತದೆ.

ಹಣ್ಣನೀವ ಕಾಯನೀವ ಪರಿಪರಿಯ ಮರಂಗಳೋ
ಪತ್ರವೀವ ಪುಷ್ಪವೀವ ಲತೆಯ ತರತರಂಗಳೋ
ತೆನೆಯ ಕೆನೆಯ ಗಾಳಿಯೋ
... ... ... ...
ನದಿ ನಗರ ನಗಾಳಿಯೋ
ಇಲ್ಲಿಲ್ಲದುದುಳಿದುದೇ
ಜೇನು ಸುರಿವ ಹಾಲು ಹರಿವ ದಿವಂ ಭೂಮಿಗಿಳಿದುದೇ

ಮಾನವನು ಪೃಥವಿಯ ಮಡಿಲಲ್ಲಿಯೇ ಮೂಡಿ ಬೆಳೆಯುತ್ತಾನೆ; ಪ್ರಕೃತಿಯು ನಿತ್ಯ ನೀಡುವ ಆಹಾರದಿಂದ ಪೋಷಣೆ ಹೊಂದುತ್ತಾನೆ; ಹೊಳೆ, ಹಳ್ಳ, ಕೆರೆ ಬಾವಿಗಳ ರೂಪದಲ್ಲಿ ಅವಳು ಕೊಡುವ ಜಲವನ್ನು ಕುಡಿದು ಬದುಕುತ್ತಾನೆ. ಹೀಗಿರುವಾಗ ಪ್ರಕೃತಿಯೇ ಪರಾಶಕ್ತಿಯೆಂದು ಅವನು ಭಾವಿಸಿದರೆ ಅದು ಸಹಜವೇ ಸರಿ.

ಪ್ರಕೃತಿಯ ಪರಿಣಾಮ ಜನ ಜೀವನದ ಮೇಲೆ ಎಷ್ಟೊಂದು ಆಗುತ್ತ ಬಂದಿದೆಯೆಂಬುದಕ್ಕೆ ಜನ ಜೀವನದಲ್ಲಿ ಪ್ರಚಲಿತವಾಗಿರುವ ಉಪಮೆಗಳು, ರೂಪಕಗಳು, ದೃಷ್ಟಾಂತಗಳು ನಿದರ್ಶನವಾಗಿವೆ. ಮಗುವಿನ ರೂಪವರ್ಣನೆಯಲ್ಲಿ ಪ್ರಕೃತಿಯ ಪ್ರಭೆ ಮೂಡದೆ ಇಲ್ಲ. ಕಣ್ಣು ಕವಳಿಯ ಹಣ್ಣಾದರೆ ಗಲ್ಲ ಕಿತ್ತಳೆ ಹಣ್ಣು; ಮೂಗು ಸಂಪಗೆಯ ನನೆ; ತುಟಿ ಚಿಗುರುದುಟಿ. ಹಲ್ಲು ದಾಳಿಂಬದ ಬೀಜ. ಮುಖವಂತೂ ಚಂದ್ರ.

ಇದು ಮುಖದ ಮಾತಾಯಿತು; ಮುಖಭಾವದ ವರ್ಣನೆಯಲ್ಲಿಯೂ ಪ್ರಕೃತಿ ತನ್ನ ಬಣ್ಣವನ್ನು ಬೆರಸಿದುದುಂಟು; ಮುಗುಳು ನಗೆ, ಕೋಪಾಗ್ನಿ, ಮಾನಸ ಸರೋವರ, ಹರ್ಷವರ್ಷ ಮೊದಲಾದ ಪ್ರಯೋಗಗಳು ಈ ಮಾತಿಗೆ ಉದಾಹರಣಗಳಾಗಿವೆ.

ಜೀವನದ ಸ್ಥಿತಿಗಳನ್ನು ಸೂಚಿಸುವುದಕ್ಕೂ ಪ್ರಕೃತಿಯು ತನ್ನ ನೆರವನ್ನು ನೀಡುತ್ತ ಬಂದಿದೆ. ಉದಾಹರಣೆಗಾಗಿ ಕೆಳಗಣ ಮಾತುಗಳನ್ನು ಪರಿಶೀಲಿಸಬೇಕು.

ಆಗ ಅವನ ಬಾಳಿನಲ್ಲಿ ಕಾರ್ಮೋಡ ಕವಿಯಿತು;
ಅವನ ಜೀವನದಲ್ಲಿ ಪೂರ್ಣ ಚಂದ್ರ ಮೂಡಿ ಬಂದ
ತೋಯಿಸಿಕೊಂಡವನಿಗೆ ಮಳೆ ಅಂಜಿಕೆ ಏಕೆ ?
ನನಗೆ ಗುಡ್ಡವೆಲ್ಲ ಹಣ್ಣಾದಂತಾಯಿತು.
ಆಗ ಅವನು ತನ್ನ ಖ್ಯಾತಿಯ ಶಿಖರವನ್ನು ಏರಿ ನಿಂತನು.
ನಿನಗೆ ಮುಗಿಲು ಮೂರೇ ಬೆರಳು ಉಳಿದಿದೆ.
ಅವನಿಗೆ ದೊಡ್ಡ ಗಿಡದ ಆಸರ ದೊರೆತಿದೆ.

## ಪ್ರಕೃತಿಯ ಸಂಪರ್ಕ:

ಒಂದು ದೃಷ್ಟಿಯಿಂದ ಪ್ರಕೃತಿಯಂತಹ ಶಿಕ್ಷಕನೇ ದೊರೆಯನು. ‘ ಜನನಿ ತಾನು ಮೊದಲ ಗುರುವು ’ ಎಂದು ಹೇಳುತ್ತಾರೆ. ಪ್ರಕೃತಿಯೂ ಮಾತೆ. ಆದುದರಿಂದ ಪ್ರಕೃತಿ ಕೂಡ ಮೊದಲ ಗುರು. ಅಷ್ಟೇ ಅಲ್ಲ; ಪ್ರಕೃತಿ ಯಾವಾಗಲೂ ಗುರು. ಮೌನವಾಗಿ, ಆದರೆ ಅಷ್ಟೇ ಪರಿಣಾಮ ಕಾರಕವಾಗಿ ಕಲಿಸುವ ಮಾತೆ ಪ್ರಕೃತಿ; ಆದುದರಿಂದಲೇ ಹಿಂದಿನ ಗುರು ಕುಲಗಳೆಲ್ಲ ಪ್ರಕೃತಿಯ ಆವರಣದಲ್ಲಿ ನೆಲೆಗೊಳ್ಳುತ್ತಿದ್ದುವು.

ಪ್ರಕೃತಿಯ ಆವರಣದಲ್ಲಿ ಬೆಳೆಯುವ ಬಾಲಕರಿಗೆ ನಿಸರ್ಗ ನಿರೀಕ್ಷಣೆ ಮಾಡುವ ಅನುಕೂಲತೆ ತಾನಾಗಿಯೇ ದೊರೆಯುವುದೆಂಬುದನ್ನು ಬೇರೆ ಹೇಳಬೇಕಿಲ್ಲ. ಕೌತುಕ ಪ್ರವೃತ್ತಿಯನ್ನು ಕೆರಳಿಸುವಲ್ಲಿ ಪ್ರಕೃತಿ ಮಾಡುವ ಕಾರ್ಯ ಅಷ್ಟಿಷ್ಟಲ್ಲ, ಶಿಕ್ಷಣಕ್ಕೆ, ಅದರಲ್ಲಿಯೂ ಬೌದ್ಧಿಕ ಶಿಕ್ಷಣಕ್ಕೆ ಕೌತುಕ ದಷ್ಟು ನೆರವಾಗುವ ಪ್ರವೃತ್ತಿ ಇನ್ನೊಂದಿಲ್ಲ. ಆದುದರಿಂದಲೇ ಪ್ರಕೃತಿಯನ್ನು ಮೌನವಾಗಿ ಕಲಿಸುವ ಗುರು ಎಂದು ಹೇಳಲು ಯಾವ ಅಭ್ಯಂತರವೂ ಇರದು.

ಮೇಲಾಗಿ ನಿಸರ್ಗದ ವಾತಾವರಣ ಬೆಳೆಯುವ ಬಾಲಕರಿಗೆ ಸಹಜ ವಾಗಿ ಪ್ರೇರಣೆಯನ್ನು ನೀಡುವಂತಹದು. ಅವರಲ್ಲಿ ಉತ್ಸಾಹವನ್ನು ತುಂಬು ವಂತಹದು. ಅವರ ಹೃದಯಕ್ಕೆ ತನ್ನದೇ ಆದ ಒಂದು ದೀಕ್ಷೆಯನ್ನು ಕೊಡು ವಂತಹದು. ಈ ಕಾರಣದಿಂದ ಕೂಡ ಪ್ರಕೃತಿಯ ಕಾರ್ಯ ತಾಯಿ ಮಾಡುವ ಕಾರ್ಯ.

ನಿಸರ್ಗದ ನೆಳಲು, ಬೆಳಕು, ಬಣ್ಣ, ಗಾಳಿ, ಪ್ರಶಾಂತತೆ, ಸುಪ್ರಸನ್ನತೆ ಗಳ ಸ್ಪರ್ಶದಿಂದ ಎಳೆಯರ ಮೇಲಾಗುವ ಹಿತವಾದ ಪರಿಣಾಮವನ್ನರಿತೇ ಕವಿ ರವೀಂದ್ರರು ತಮ್ಮ ಶಾಂತಿನಿಕೇತನವನ್ನು ನಿಸರ್ಗದ ಆವರಣದಲ್ಲಿ ನೆಲೆಗೊಳಿಸಿದರು. ಪ್ರಕೃತಿಯ ಸೌಂದರ್ಯ, ಗಂಧ, ನೆಳಲು, ಬೆಳಕು ಗಾಳಿ ಇವು ಮಾತ್ರವಲ್ಲ, ಧೂಳಿ ಕೂಡ ಬಾಲಕರ ಬೆಳವಣಿಗೆಗೆ ನೆರವಾಗುವು ದೆಂಬುದು ಅವರ ಅಭಿಪ್ರಾಯ.

ಕವಿಗಳಲ್ಲಿ ಅನೇಕರು ಪ್ರಕೃತಿಯಿಂದ ಪ್ರೇರಣೆ ಹೊಂದಿರುವರೆಂಬುದಷ್ಟೇ ಅಲ್ಲ; ಅವಳಿಂದ ನೇರವಾಗಿ ಕಲಿತು ಅವಳನ್ನು ಶಿಕ್ಷಕಿಯೆಂದು ಆರಾಧಿಸಿದುದುಂಟು. ಅವರಲ್ಲಿ ವರ್ಡ್ಸ್‌ವರ್ತ ಕವಿಯ ಹೆಸರನ್ನು ಪ್ರಾಮುಖ್ಯವಾಗಿ ಹೇಳಬಹುದು. ವಿದ್ಯಾಕೇಂದ್ರಗಳು, ವಿಶ್ವವಿದ್ಯಾನಿಲಯಗಳು ಹಳ್ಳಿಯ ಆವರಣದಲ್ಲಿ ಮೂಡಿ ಬೆಳೆಯಬೇಕೆಂದು ಇತ್ತಿತ್ತಲಾಗಿ ಮತ್ತೆ ವಿಚಾರವಂತರು ಅಭಿಪ್ರಾಯ ಪಡುತ್ತಲಿದ್ದಾರೆ. ಅದು ಯೋಗ್ಯವೇ ಸರಿ.

— — — —

# ಗಿರಿಯ ನೆತ್ತಿಯಲ್ಲಿ

ನೋಡಯ್ಯ, ಪ್ರಿಯ ಬಂಧು, ಚೈತ್ರ ರವಿಯುದಯದಲಿ
ಸಹ್ಯಾದ್ರಿ ಕಾನನಗಳುತ್ತಮಾಂಗದಿ ಸೃಷ್ಟಿ
ದೃಶ್ಯವೈಕುಂಠವನೆ ನೆಯ್ದಿದೆ

—ಕುವೆಂಪು-ಕವಿಶೈಲ

'ಬಾ ನನ್ನೆಡೆಗೆ' ಎಂದು ಕರೆಯುವ ಧರೆಯ ಸಿರಿನೋಟಗಳಲ್ಲಿ ಗಿರಿಯೂ ಒಂದು, ಚಿತ್ತವನ್ನು ಎತ್ತರಕ್ಕೆ ಎತ್ತುವ ಮುಖ್ಯ ದೃಶ್ಯಗಳಲ್ಲಿ ಶೈಲದ ದೃಶ್ಯ ಮುಖ್ಯವಾದುದು. ಬೆಟ್ಟ ಎಷ್ಟು ದೂರದಲ್ಲಿ ಕಂಡರೆ ಅಷ್ಟು ಅದರ ಆಕರ್ಷಣೆ ಹೆಚ್ಚು. 'ನೀಲಗಿರಿ'ಗೆ ಮಾತ್ರ ನೀಲಗಿರಿ ಎಂಬ ಹೆಸರು ಏಕೆ ಬಂದಿತೋ ? ಅತಿ ದೂರದಲ್ಲಿ ಪೃಥ್ವಿ ಗಗನವನಪ್ಪುವಲ್ಲಿ ಮಸ ಮಸಕಾಗಿ ತೋರುವ ಯಾವುದೇ ಗಿರಿಯ ಸಾಲು ನೀಲವಾಗಿಯೇ ತೋರುವುದಿಲ್ಲವೇ? ಮುಗಿಲಿನ, ಕಡಲಿನ ಹಾಗು ದೂರದ ಶೈಲದ ನೀಲವರ್ಣದಲ್ಲಿ ಯಾವುದೋ ಒಂದು ಅನುಪಮವಾದ, ಅಮೋಘವಾದ ಆಕರ್ಷಕ ಶಕ್ತಿ ಇದ್ದಿರಲು ಸಾಕು.

ಗಿರಿಯ ದೃಶ್ಯ ಕಲ್ಪನೆಗೆ ಗರಿ ಮೂಡಿಸುವಂತಹದು. ಕವಿಗಳ ಹಾಗು ಕಲಾವಿದರ ಕಲ್ಪನೆ ಪರ್ವತಶ್ರೇಣಿಗಳ ಸುತ್ತ ಸುಳಿದುದೇ ಹೆಚ್ಚು. ಭಾರತ ದೇಶದ ಕವಿಗಳ ಕಲ್ಪನೆಗೆ ಪರ್ವತ ಶಿಖರಗಳು ಅದೆಷ್ಟೋ ಸಲ ತಲ್ಪವಾಗಿ ಪರಿಣಮಿಸಿದುದುಂಟು. ಭಾರತವು ಶೈಲ-ಸೌಭಾಗ್ಯವನ್ನು ವಿಶೇಷವಾಗಿ ಪಡೆದ ದೇಶ. ಉತ್ತರದ ಹಿಮಾಲಯ ಪರ್ವತಶ್ರೇಣಿಯಂತೂ ಅದ್ಭುತವೂ ಅಮೋಘವೂ ಆದ ಪರ್ವತಶ್ರೇಣಿ. ಉತ್ತರದಲ್ಲಿ ಉದ್ದಕ್ಕೂ ಹಬ್ಬಿದ ಆ ಶ್ರೇಣಿಯು ನಮ್ಮ ದೇಶದ ರಕ್ಷಣೆಗೆ ಪ್ರಕೃತಿ ಗೈದ ಒಂದು ಅಪ್ರತಿಮ ಯೋಜನೆಯೆಂದಿಷ್ಟೇ ತಿಳಿದರೆ ಸಾಲದು; ಗಂಗಾ ಯಮುನಾನದಿಗಳ ಇಕ್ಕೆಲ

ದಲ್ಲಿ ಸೊಗಸಾದ ಮತ್ತು ಅತ್ಯಂತ ಫಲವತ್ತಾದ ಪ್ರದೇಶವನ್ನು ರಚಿಸಲು ಅದು ಕಾರಣವಾಗಿದೆಯೆಂದು ಭಾವಿಸಿದರೆ ಹಿಮ ಶೈಲದ ಬಗೆಗೆ ಒಂದು ಅಂಶವನ್ನು ಮಾತ್ರ ಗಮನಿಸಿದಂತೆ. ಭಾರತಕ್ಕೆ ಉದಾತ್ತವಾದ ಆಧ್ಯಾತ್ಮಿಕ ಸ್ಫೂರ್ತಿಯನ್ನು ನೀಡಿದ ಕೀರ್ತಿ ಹಿಮಾಲಯಕ್ಕೆ ಉಂಟು. ಹಿಮವತ್ ಪರ್ವತಾವಳಿಯು ಭಾರತೀಯರ ಭಾವ ಭಾವನೆಗಳೆಂಬ ಗಂಗಾ ಯಮುನಾ ನದಿಗಳ ಉಗಮಸ್ಥಳವಾಗಿ ಭಾರತದ ಕಾವ್ಯ ಹಾಗು ಕಲಾಕ್ಷೇತ್ರವನ್ನು ಹಸನಗೊಳಿಸಿದೆಯೆಂಬುದು ಗಮನಾರ್ಹವಾದ ಸಂಗತಿ. ಒಂದು ಉದಾಹರಣೆ ಸಾಕು ಈ ಮಾತಿನ ನಿದರ್ಶನಕ್ಕೆ. ಕವಿ ಶ್ರೇಷ್ಠನಾದ ಕಾಳಿದಾಸನು ಯಕ್ಷನ ಸಂದೇಶವನ್ನು ಆತನ ಪ್ರಿಯಗೆ ಕಳುಹಿಸುವ ಒಂದು ನಿಮಿತ್ತದಿಂದ ಮೇಘದೂತನನ್ನು ರಾಮಗಿರ್ಯಾಶ್ರಮದಿಂದ ಅಲಕಾನಗರಕ್ಕೆ ತೇಲಿಸಿ ಕೊಂಡು ಹೋದನಷ್ಟೇ? ಯಕ್ಷನಗರವಾದ ಆ ಅಲಕಾಪುರಿಗೆ ನೆಲೆ ಗೊಟ್ಟುದು ಹಿಮಶೈಲ. ಕಾಳಿದಾಸನು ಮೇಘ-ವಿಮಾನದಲ್ಲಿ ಕುಳಿತು ಉತ್ತರದ ಅಲಕಾನಗರಿಗೆ ಏರಿ ಹೋಗಿ ಆ ಉನ್ನತಸ್ಥಳದಿಂದ ತನ್ನ ದೃಷ್ಟಿ ಯನ್ನು ಮತ್ತೆ ದಕ್ಷಿಣಕ್ಕೆ ಬೀರಿ ಭಾರತದ ರಮ್ಯಪ್ರದೇಶಗಳ ರಮ್ಯತರ ದೃಶ್ಯಗಳನ್ನು ಕಂಡು ಹರ್ಷಪುಲಕಿತನಾದಂತಿದೆ, ತನ್ನ ಮೇಘದೂತ ಕಾವ್ಯದ ಅನುಸಂಧಾನದ ಸಮಯದಲ್ಲಿ. ಹಿಮಶೈಲದ ಕೈಲಾಸಗಿರಿಯನ್ನೂ ರಾಜ ಹಂಸಗಳಾಡುವ ಮಾನಸ ಸರೋವರವನ್ನೂ ಕಾಳಿದಾಸನು ತನ್ನ ಆ ಕಾವ್ಯ ದಲ್ಲಿ ನಿರ್ದೇಶಿಸಿದ್ದಾನೆ. ಗಿರಿಸುತೆಯ ಪತಿಯೂ ತಾಂಡವಲೀಲಾ ಮೂರ್ತಿಯೂ ಆದ ಮಹಾದೇವನ ನಿವಾಸಸ್ಥಾನವಾದ ಕೈಲಾಸದ ದಿವ್ಯ ಕಲ್ಪನೆಗೆ ಹಿಮಶೈಲವೇ ತಲ್ಪವಾಗಿ ಪರಿಣಮಿಸಿತು. ಮಾನಸ ಸರೋವರವು ಮಾನಸ ಸರೋವ ಮಾತ್ರವಲ್ಲ; ಮಾನವನ ಉನ್ನತ ಮಾನಸದ ಸಂಕೇತ. ಅದರಂತೆ ಮಾನಸ ಸರೋವರದೊಳಗಾಡುವ ರಾಜ ಹಂಸಗಳು ಕೇವಲ ಪಕ್ಷಿಗಳಲ್ಲ. ಅವು ಆತ್ಮತತ್ವದ ಅಮರ ಸಂಕೇತವಾಗಿವೆ.

ದೃಷ್ಟಿಯನ್ನು ಮೇಲಕ್ಕೆತ್ತುವ ಒಂದು ಗುಣ ಹಿಮಗಿರಿಯಲ್ಲಿದೆ ಯೆಂದು ಹೇಳಿಯಾಯಿತಷ್ಟೇ? ಬುದ್ಧನ ತೊಟ್ಟಿಲು ತೂಗಿದ ಲುಂಬಿಣಿ ಎಂಬ ಗ್ರಾಮ ಹಿಮಾಲಯದ ಅಡಿಯಲ್ಲಿದ್ದಿತೆಂಬುದನ್ನು ಲಕ್ಷ್ಯದಲ್ಲಿಟ್ಟರೆ ಹಿಮಾಲಯವು ಬಾಲ ಸಿದ್ಧಾರ್ಥನ ಮನದ ಮೇಲೆ ತನ್ನ ಔನ್ನತ್ಯದ ಪ್ರಭಾವ

ವನ್ನು ಬೀರಿರಲು ಸಾಕೆಂಬ ಭಾವನೆ ಹೊಳೆದೀತು. ಶಾಂತಿಕಾಂತಿಗಳ ಸಾಧನೆಗೆ ಹಾಗು ಉನ್ನತವಾದ ಆದರ್ಶಗಳ ಆರಾಧನೆಗೆ ಹಿಮವತ್ ಪರ್ವತವು ಭಾರತದ ದೃಷ್ಟಾರರನ್ನು ಎಂದಿನಿಂದಲೋ ಪ್ರೇರಿಸಿ ತೃಪ್ತಿಯನ್ನು ನೀಡುತ್ತ ಬಂದಿದೆ. ಆಧ್ಯಾತ್ಮ ಪ್ರಪಂಚದಿಂದ ಸಾಹಸಪ್ರಪಂಚಕ್ಕೆ ತಿರುಗಿದರೂ ಹಿಮಗಿರಿಯ ಹಿರಿಮೆ ಚಿರಸ್ಥಾಯಿಯಾಗಿದೆ. ಮೌಂಟ್ ಎವ್ವೆರೆಸ್ಟ್ ಹಾಗು ತೇನಸಿಂಗ–ಈ ಎರಡು ಹೆಸರುಗಳನ್ನು ಮನದಂದರೆ ಸಾಕು ಭಾರತದ ಹೆಮ್ಮೆಯನ್ನು ಗೌರೀಶಂಕರಕ್ಕೆ ಏರಿಸಿದ ಹಿಮಗಿರಿಯ ಮಹತಿಯು ಅರಿವಾಗದಿರದು.

ಇನ್ನು ಕನ್ನಡ ನಾಡಿನ ಪಡುವಣಕ್ಕೆ ಕಣ್ಣೋಟ ಹರಡಿದರೆ ಸಹ್ಯಾದ್ರಿಗೂ ಅದರದೇ ಆದ ಒಂದು ಘನತೆಯುಂಟು. ದಕ್ಷಿಣ ಪಥದಲ್ಲಿ ಮುನ್ಸೂನಿನ ನವೀನ ಲೀಲೆ ನಡೆಯುವುದು ಸಹ್ಯಾದ್ರಿಯ ಸೌಹಾರ್ದದ ಪರಿಣಾಮವಾಗಿ. ಮುನ್ಸೂನಿನ ಮೇಘಗಳು ವಿರಚಿಸುವ ಅದ್ಭುತ ರಮ್ಯ ದೃಶ್ಯಗಳೂ ಸಲೀಲವಾಗಿ ಇಳಿಯುವ ಸಲಿಲಾವತರಣವೂ ಸಹ್ಯಾದ್ರಿಯ ಸಹಕಾರದಿಂದಲ್ಲದೆ ದೊರೆಯವು. ಪ್ರಪಂಚದಲ್ಲಿಯೇ ಅತ್ಯಂತ ಭವ್ಯರಮಣೀಯ ಜಲಪಾತವಾದ ಜೋಗದ ನಾಟ್ಯ ಸಹ್ಯಾದ್ರಿಯ ರಂಗದಲ್ಲಿಯೇ ನಡೆಯುತ್ತದೆ.

ಇಷ್ಟೇ ಅಲ್ಲ; ಕನ್ನಡಿಗರ ವಾಸ್ತುಶಿಲ್ಪಕಲಾಚಮತ್ಕೃತಿ ಸಹ್ಯಾದ್ರಿಯಿಂದ ಚೆಲ್ಲವರಿದು ಬಂದ ಬೆಟ್ಟಗಳಲ್ಲಿ ಮೈವೆತ್ತ ಸಂಗತಿಯನ್ನು ಇಲ್ಲಿ ಸ್ಮರಣೆಗೆ ತಂದುಕೊಳ್ಳಬೇಕು. ಬಾದಾಮಿಯ ಬೆಟ್ಟದಲ್ಲಿ ಹಾಗು ಶ್ರವಣಬೆಳ್ಗೊಳದ ಬೆಟ್ಟದಲ್ಲಿ ಕನ್ನಡಿಗರ ವಾಸ್ತುಶಿಲ್ಪ ಹಾಗು ಮೂರ್ತಿಶಿಲ್ಪ-ಕಲಾವೈಶಿಷ್ಟ್ಯವು ಎದ್ದು ಮೂಡಿದೆ. ಹಿಮಾಚಲವು ಹಿಮಶ್ರೀಯನ್ನು ಶಿಖರಶಿಖರದಲ್ಲಿ ಎತ್ತಿ ತೋರಿದರೆ ಸಹ್ಯಾಚಲವು ವನಶ್ರೀಯನ್ನು ಅಲ್ಲಲ್ಲಿ ತೆರೆದು ತೋರುತ್ತದೆ. ಸಹ್ಯಾಚಲವು ಹೀಗೆ ತೆರೆದು ತೋರುವ ದೃಶ್ಯವು ಬಹು ರಮ್ಯವಾದುದು. ಕಲ್ಪನೆಯ ಕಣ್ಣಿನಿಂದ ನೋಡಿದರಂತೂ ಅದು ಇನ್ನೂ ರಮ್ಯ. ಮಲೆಯ ಅಡಿಯ ಕೊಳ್ಳ,ಕೊಳ್ಳದಲ್ಲಿ ಹರಡಿದ ಬೆಳ್ಳಿಯರಸವೆಂಬಂತೆ ಹರಿಯುವ ಹಳ್ಳ, ಹಳ್ಳದ ಇಬ್ಬದಿಯಲ್ಲಿ ಬೆಳೆದ ಹಸಿರು, ಹರಡಿದ ಹಸಿರಿನಲ್ಲಿ ಅಲ್ಲಲ್ಲಿ ಅರಳಿದ ಬಣ್ಣ ಬಣ್ಣದ ಹೂಗಳ ಚಿತ್ತಾರ; ನಡುನಡುವೆ ಎತ್ತರವಾಗಿ

ಬೆಳೆದ ತರುರಾಜಿ,—ಇದಕ್ಕೂ ಚೆಲುವಿನ ನೋಟ ಬೇರೆ ಇರಬಹುದೇ ?—ಎನಿಸುವುದು. ಮಲೆಯ ಅಡಿಯಲ್ಲಿ ಹಳ್ಳ ಹರಿಯುತ್ತಿರುವಾಗ ಅದರ ಓರೆಯಲ್ಲಿ ಮೇಯುವ ದನಕರುಗಳನ್ನು ತಣಿಸಲು ತುರುಗಾಹಿಗಳು ಮರದಡಿಯಲ್ಲಿ ಮೈಚಾಚಿ ಕೊಳಲೂದುವ ದೃಶ್ಯವನ್ನು ನೋಡುವ ಭಾಗ್ಯ ದೊರೆತವನೇ ಭಾಗ್ಯವಂತ.

ಗಿರಿಯ ನೆತ್ತಿಯಿಂದ ನೋಡಿದ ನೋಟ ಒಂದು ಬಗೆಯಾದರೆ ಗಿರಿಯತ್ತ ನೋಡಿದಾಗ ಕಾಣುವ ನೋಟ ಇನ್ನೊಂದು ರೀತಿಯ ಚೆಲುವಿನ ಬೇಟ. ಸೂರ್ಯೋದಯ ಸೂರ್ಯಾಸ್ತಗಳನ್ನು ಗಿರಿಯ ನೆರೆಯಲ್ಲಿ ಕಾಣಬೇಕು; ಆಗ ಅವುಗಳ ಪರಸ್ಪರ ಸೌಂದರ್ಯವು ಅಧಿಕವಾಗುತ್ತದೆ. ಉದಯಾಚಲವನ್ನು ಮೆಲ್ಲನೆ ಹತ್ತಿ ಬರುವ ಎಳೆ ನೇಸರನ ಚೆಲುವು ಬಣ್ಣನೆಯನ್ನು ಮೀರಿಸುವಂತೆ ಅಸ್ತಾಚಲದ ಆಚೆಗೆ ಇಳಿಯುವ ಸೂರ್ಯನ ಲಾವಣ್ಯವೂ ವರ್ಣನಾನೈಪುಣ್ಯವನ್ನು ಒರೆಗೆ ಹಚ್ಚುವಂತಹದು.

ಋತು ಋತುವಿಗೊಂದು ಹೊಸ ಬೆಡಗ ತೊಟ್ಟು ಕಣ ಸೆಳೆಯುತ್ತದೆ ಬೆಟ್ಟ. ಅದೇರೀತಿ ದಿನದ ಪ್ರಹರ ಪ್ರಹರಕ್ಕೊಂದು ಅಂದವನ್ನು ತಳೆದು ಕರೆಯುತ್ತದೆ ಗಿರಿ.

> " ಬೆಳಗಿನಲಿ ಬೈಗಿನಲಿ ಮಾಗಿಯಲಿ ಚೈತ್ರದಲಿ
> ಮಳೆಯಲ್ಲಿ ಮಂಜಿನಲಿ ಹಗಲಿನಲಿ ರಾತ್ರಿಯಲಿ
> ದೃಶ್ಯ ವೈವಿಧ್ಯಮಂ ರಚಿಸಿ ನೀ ಭುವನದಲಿ
> ಸ್ವರ್ಗವಾಗಿಹೆ ನನಗೆ............"

ಎಂದು ಶೈಲವನ್ನು ಕುರಿತು ಹಾಡಿದ್ದಾರೆ ಕವಿಶೈಲದಲ್ಲಿ ಕುಳಿತ ಕುವೆಂಪು.

ಗಿರಿಯೊಡನೆ ಮೇಘದಾಟ ನಡೆದಾಗ ಕಾಣುವ ವಿವಿಧ ಸುಂದರ ದೃಶ್ಯಗಳನ್ನು ಯಾರು ಬಣ್ಣಿಸಬಲ್ಲರು ? ಬಿಳಿಮೋಡ, ಕೆಮ್ಮೋಡ, ಕಾರ್ಮೋಡಗಳು ಶೈಲದ ಸೆಳೆತಕ್ಕೆ ಸಿಕ್ಕು ತೇಲಿ ಬಂದು ಅದರ ನೆತ್ತಿಯಲ್ಲೋ, ಪಕ್ಕದಲ್ಲೋ ಹಿನ್ನೆಲೆಯಲ್ಲೋ ನಿಂತಾಗ ಉಂಟಾಗುವ ರಮಣೀಯತೆಗೆ ಮಾರು ಹೋಗದವರಾರು ? ಅದು ಹೋದರೆ ಹೋಗಲಿ; ಮಧ್ಯಾಹ್ನದಲ್ಲಿ ಒಮ್ಮೊಮ್ಮೆ ತುಂಡು

ಮೋಡಗಳು ಚಲಿಸುತ್ತಿರುವಾಗ ಅವುಗಳ ನೆರಳು ಗುಡ್ಡದ ಎದೆಯ ಮೇಲೆ ಮೂಡುವ ಚೆಲುವಿನ ಮೋಡಿಯನ್ನು ನೋಡಬೇಕು. ಅದೂ ಹೋದರೆ ಹೋಗಲಿ; ನಸುದೂರದ ಗುಡ್ಡದೋರೆಯಲ್ಲಿ ಮಾಯೆ ಬರೆದ ಚಿತ್ರದಂತೆ ಮೈಮರೆದು ಮೇಯುವ ಕುರಿ ಹಿಂಡನ್ನು ಕಾಣಬೇಕು.

ಗಿರಿಯ ಕರೆ ಒಲವಿನ ಕರೆ ಮಾತ್ರವಲ್ಲ; ಸಾಹಸದ ಆಹ್ವಾಹನವೂ ಅಹುದು. ಗಿರಿಶಿಖರ ಔನ್ನತ್ಯದ ಚಿಹ್ನ. "ಏಳಿ ಎತ್ತರಕ್ಕೆ" ಎಂಬುದು ಅದರ ಸಂದೇಶ. ನಭಶ್ಚುಂಬಿಯಾಗಿ ನಿಂತು ಶಾಂತ, ಗಂಭೀರ, ಉದಾರ ಜೀವನ ದತ್ತ ಜೀವವನ್ನು ಪ್ರೇರಿಸುವ ಗಿರಿಯ ಕರೆಗೆ ಎದೆ ತೆರೆದರೆ ಅದೇ ಯೋಗ; ಅದೇ ಕ್ಷೇಮ.

— — — —

# ಚಿಕ್ಕೆಗಳ ಬಳಗದಲ್ಲಿ

Twinkle, twinkle little star
How I wonder what you are.

“ನಾನು ಕಡಬು ಎಣಿಸುತ್ತೇನೆ, ನೀನು ಚಿಕ್ಕೆ ಎಣಿಸು ” ಎಂಬ ಮಾತನ್ನು ಚಿಕ್ಕಂದಿನಲ್ಲಿ ಒಂದು ಪಠ್ಯ ಪುಸ್ತಕದಲ್ಲಿ ಓದಿದ ನೆನಪು ಚಿಕ್ಕೆಗಳನ್ನು ಕಂಡಾಗಲೆಲ್ಲ ನನ್ನ ಮನವಲ್ಲಿ ತೋರಿ ಬರುತ್ತದೆ. ಕಡುಬುಗಳನ್ನು ಎಣಿಸುವವರು ಜಾಣರೆಂಬ ಅಂದಿನ ಭಾವನೆ ಮಾಯವಾಗಿ ಚಿಕ್ಕೆಗಳನ್ನು ಎಣಿಸಲು ಯತ್ನಿಸುವವರೇ ಜಾಣರೆಂದು ಇಂದು ಮನಗಾಣುತ್ತಿದ್ದೇನೆ. ಏಕೆಂದರೆ ಚಿಕ್ಕೆಗಳನ್ನು ಎಣಿಸಲು ತೊಡಗುವವರು ಹೆಚ್ಚಿನ ಧ್ಯೇಯವನ್ನು ಜೀವನದಲ್ಲಿ ಸಾಧಿಸುವ ಸಾಹಸ ಮಾಡುತ್ತಾರೆ.

ಆಕಾಶಕ್ಕೆ ಅನೇಕ ಹೆಸರುಗಳುಂಟು. ಅವುಗಳಲ್ಲೆಲ್ಲ ತಾರಾಮಂಡಲವೆಂಬ ಹೆಸರೇ ಹೆಚ್ಚು ಉಚಿತವೆಂದು ನನ್ನ ಮತ. ಆಕಾಶದ ಅನಂತತೆಯ ಕಲ್ಪನೆಯನ್ನು ಹಗಲಗಿಂತ ಇರುಳು ಹೆಚ್ಚು ನಿಚ್ಚಳವಾಗಿ ಮಾಡಿಕೊಡಬಲ್ಲದು. ಹಗಲಿನಲ್ಲಿ ದೃಷ್ಟಿ ವಸ್ತು ಸಮೂಹದ ಸೆರೆಮನೆಯಲ್ಲಿ ಸುಳಿದಾಡುತ್ತದೆ. ಜಗದ ಮೊಗಕ್ಕೆ ಇರುಳು ಇಳಿದಾಗ ಜಡವಸ್ತುಗಳೆಲ್ಲ ಅದರಲ್ಲಿ ಕರಗಿ ಹೋಗುವುದರಿಂದ ಮಾನವನ ದೃಷ್ಟಿ ತಾನಾಗಿಯೇ ಮಿನುಗುವ ತಾರಾಲೋಕಕ್ಕೆ ಏರಿಹೋಗುತ್ತದೆ. ಎತ್ತರಕ್ಕೆ ಏರಬಲ್ಲ ಚಿತ್ತ ಚಿಕ್ಕೆಗಳ ಧ್ಯಾನದಲ್ಲಿ ಲೀನವಾಗುತ್ತದೆ. ಮನವನ್ನು ತೊಳೆದು ತಿಳಿ ಮಾಡಿ ಅದರಲ್ಲಿ ಭಾವಜಲವನ್ನು ತುಂಬಿಧರೆ ಆ ಜಲದಲ್ಲಿ ತಾರಾಮಂಡಲವು ಪ್ರತಿಬಿಂಬಗೊಳ್ಳದಿರದು.

ಒಂದು ವಸ್ತುವಿನ ಆಕಾರವನ್ನೋ, ಬಣ್ಣವನ್ನೋ, ನಾದವನ್ನೋ, ಸ್ಪರ್ಶವನ್ನೋ ತಟ್ಟನೆ ಮನಮುಟ್ಟುವ ರೀತಿಯಲ್ಲಿ ಸೂಚಿಸಬಲ್ಲ ಹೆಸರೇ ಉಚಿತವಾದ ಹೆಸರು. ಈ ದೃಷ್ಟಿಯಿಂದ ‘ಚಿಕ್ಕೆ, ಎಂಬ ಶಬ್ದವು ನಕ್ಷತ್ರ,

ತಾರೆ ಮೊದಲಾದ ಬೇರೆ ಶಬ್ದಗಳನ್ನೆಲ್ಲ ಮೀರಿದುದು. ವಸ್ತುತಃ ಚಿಕ್ಕೆಗಳು ಬಹು ದೊಡ್ಡವಾಗಿರಬಹುದು. ಆದರೆ ಬಹುದೂರ ಅನಂತವಾದ ಆಕಾಶ ದಲ್ಲಿ ಹೊಳೆಯುವ ಅವುಗಳನ್ನು ನಾವು ಕಂಡಾಗ ಚಿಕ್ಕವಾಗಿ ತೋರುವು ದಿಲ್ಲವೇ ? ಹೀಗೆ ಚಿಕ್ಕವಾಗಿ ತೋರುವ ಅವುಗಳಿಗೆ ' ಚಿಕ್ಕೆ ' ಎಂಬ ಹೆಸರು ಎಷ್ಟು ಅರ್ಥ ಸೂಚಕವಾಗಿದೆ ! ಮೇಲಾಗಿ ' ಚಕ ಚಕ ' ಎಂದು ಹೊಳೆ ಯುತ್ತವೆ ಚಿಕ್ಕೆಗಳು. ಅವುಗಳ ಹೊಳೆತವೂ ' ಚಿಕ್ಕೆ ' ಎಂಬ ಹೆಸರನ್ನು ಪ್ರೇರಿಸಿರಲು ಸಾಕು.

ಆಕಾಶದಲ್ಲಿ ಮೂಡಿ ಮುಳುಗುವ ಸೂರ್ಯ ಚಂದ್ರರು ತಮ್ಮ ಸೌಂದರ್ಯದಿಂದ ಆನಂದವನ್ನೂ ಆಹ್ಲಾದವನ್ನು ಉಂಟುಮಾಡುವರೇನೋ ನಿಜ. ಆದರೆ ನಕ್ಷತ್ರಗಳು ಬೀರುವ ಪರಿಣಾಮವೇ ಬೇರೆ. ಅವುಗಳ ಉದಯದಿಂದ ಆಗುವ ಅನುಭವವು ಒಂದು ಅಗಾಧವಾದ ಅನುಭವ. ಅವು ನಮ್ಮನ್ನು ಒಂದು ತನ್ಮಯತೆಗೆ ಸಾಗಿಸಿಕೊಂಡು ಹೋಗುತ್ತವೆ. ಕೇವಲ ಸ್ಥೂಲಮಾನದಿಂದ ಚಂದ್ರ ನಮಗೆ ಹೆಚ್ಚು ಸಮೀಪವಾಗಿರಬಹುದು. ಆದರೆ ಸೌಹಾರ್ದದ ದೃಷ್ಟಿಯಿಂದ ಚಿಕ್ಕೆಗಳು ನಮಗೆ ಹೆಚ್ಚು ಹತ್ತಿರ. ಚಂದ್ರ ಒಂದು ಇರುಳು ಒಂದು ಮುಖ ತೋರಿದರೆ ಇನ್ನೊಂದು ಇರುಳು ಇನ್ನೊಂದು ಮುಖ ತೋರಿ ನಮ್ಮನ್ನು ಪೆಚ್ಚುಗೊಳಿಸುತ್ತಾನೆ. ಚಿಕ್ಕೆಗಳು ಹಾಗಲ್ಲ. ಅವುಗಳ ಸ್ನೇಹ ಅಚಲವಾದ ಸ್ನೇಹ. ದೂರದಿಂದ ಶಾಂತವಾಗಿ ಮೌನವಾಗಿ ತೂರಿ ಬರುವ ಕರುಣೆಯ ಕಿರಣಗಳ ತೂಗುಯ್ಯಾಲೆಯಲ್ಲಿ ಅವು ನಮ್ಮ ಅಂತಃಕರಣವನ್ನು ತೂಗಿ ಮಧುರ ಸ್ವಪ್ನದಲ್ಲಿ ಲೀನಗೊಳಿಸುತ್ತವೆ.

ಚಿಕ್ಕವರಿಗಂತೂ ಚಿಕ್ಕೆಗಳ ಸಂಬಂಧ ಇನ್ನೂ ಸಮೀಪ. ಚಿಕ್ಕೆಗಳ ನಗೆ ಮಕ್ಕಳ ನಗೆಯಂತೆ ಮೋಹಕ. ಮುಗಿಲ ಅಂಗಳದಲ್ಲಿ ನಡೆಯುವ ಚಿಕ್ಕೆಗಳ ಆಟ ಜಗದ ಅಂಗಳದಲ್ಲಿ ಸಾಗುವ ಚಿಕ್ಕ ಮಕ್ಕಳ ಆಟವನ್ನೇ ಹೋಲುತ್ತದೆ. ಹಗಲನ್ನು ಬೆಳಗಿದ ನೇಸರನು ಪಡುವಣದಲ್ಲಿ ಇಳಿದ ಬಳಿಕ ಅದೆಷ್ಟು ಬೇಗ ಚಿಕ್ಕೆಗಳ ಬಳಗ ಮುಗಿಲಿನಂಗಳದಲ್ಲಿ ಬಂದು ಕೂಡುತ್ತದೆ! ಅವುಗಳ ತಿಳಿ ನಗೆಯಿಂದ ತಿಳಿಬಗೆಯಿಂದ ನಕ್ಕು ನಲಿಯಲು ಪ್ರೇರಣೆ ಪಡೆಯದವರು ಭಾಗ್ಯಹೀನರೇ ಸರಿ.

'ಭಾಗ್ಯ' ಎಂದಾಗ ಚಿಕ್ಕೆಗಳ ನೆನಪು ಬಾರದೆ ಇರದು. ನಕ್ಷತ್ರಗಳು ನಮ್ಮ ಭಾಗ್ಯವನ್ನು ನಿರ್ಧರಿಸುವವೆಂಬ ನಂಬಿಕೆ ಅದು ಹೇಗೋ ಅನೇಕ ಜನಾಂಗಗಳಲ್ಲಿ ಬೆಳೆದು ಬಂದಿವೆ. ನಕ್ಷತ್ರಗಳು ನಮ್ಮ ದೈವ ರೇಷೆಯನ್ನು ಬರೆಯುವವೋ ಇಲ್ಲವೋ—ಆ ಮಾತು ಬೇರೆ. ಆದರೆ ನಮ್ಮ ಜೀವನಕ್ಕೆ ಪ್ರೇರಣೆಯನ್ನು ಒದಗಿಸುವ ಕಾರ್ಯ ಅವುಗಳಿಂದ ನಡೆಯುತ್ತದೆ ಎಂದು ಹೇಳಬಹುದು. ತಾರೆಗಳಂತೆ ಮೇಲಕ್ಕೆ ಏರಿ ಹೊಳೆಯಲು ಬಯಸದವರು ಯಾರು? ತಾರೆಗಳತ್ತ ದೃಷ್ಟಿಯನ್ನು ಎತ್ತ ಬಲ್ಲವನು ಬಾಳಿನಲ್ಲಿ ಕೆಳಕ್ಕೆ ಇಳಿಯುವ ಸಂಭವ ಬಹಳ ಕಡಿಮೆ. ಅಂಥವನ ಕರುಣೆ ಮಾತ್ರ ನಕ್ಷತ್ರದ ಕಿರಣದಂತೆ ಕೆಳಗಣ ಹಂತದಲ್ಲಿ ಬಾಳುವ ಜೀವಿಗಳ ಉದ್ಧಾರಕ್ಕಾಗಿ ಇಳಿದು ಬರುವುದು. ಕರುಣೆಯ ಕಿರಣವನ್ನು ತಳೆಯ ಬೇಕೆನ್ನುವವರು ನಕ್ಷತಗಳ ಆದರ್ಶವನ್ನು ಇಟ್ಟುಕೊಳ್ಳಬೇಕು.

ನಿಜವಾಗಿಯೂ ನಕ್ಷತ್ರಗಳಲ್ಲಿ ಮಾನವನು ತನ್ನ ಆದರ್ಶವನ್ನು ಕಾಣುತ್ತ ಬಂದಿದ್ದಾನೆ. ಅವುಗಳಂತೆ ಮೌನವಾಗಿ ತೊಳಗಿ ಬೆಳಗುವ ಬಯಕೆ ಅವನ ಮುನ್ನಡೆಗೆ ಕಾರಣವಾಗುತ್ತ ಬಂದಿದೆ. ಧ್ರುವನ ಕಥೆಯನ್ನು ಯಾರು ಕೇಳಿಲ್ಲ? ಅವನು ಒಂದು ಸ್ಥಿರವಾದ ಪದವಿಯನ್ನು ಬಯಸಿದಾಗ ನಕ್ಷತ್ರ ದತ್ತ ನೋಟವನ್ನು ಬೀರಿ ಧ್ರುವ ತಾರೆಯಾದ ; ತಮ್ಮೂಲಕ ಸ್ವಾರ್ಥವನ್ನು ಮಾತ್ರವಲ್ಲ, ಪರಾರ್ಥವನ್ನೂ ಸಾಧಿಸಿದ. ಸರಿಯಾದ ಮಾರ್ಗದರ್ಶನ ಮಾಡುವ ಪರೋಪಕಾರಕ್ಕಿಂತ ಹೆಚ್ಚಿನ ಪುಣ್ಯ ತಾನೇ ಏನು? 'ಧ್ರುವತಾರೆ' ಎಂಬ ಪ್ರಯೋಗವು ಮಾರ್ಗದರ್ಶನದ ಸಂಕೇತವಾಗಿ ಪರಿಣಮಿಸಿದೆ. ಜೀವನದಲ್ಲಿ ನಾವಿಟ್ಟುಕೊಂಡ ಆದರ್ಶಗಳು ನಮ್ಮ ಜೀವನವನ್ನು ಸ್ವಲ್ಪ ಮಟ್ಟಿಗಾದರೂ ರೂಪಿಸುತ್ತವೆ. ಅದೇ ರೀತಿ ನಮ್ಮಲ್ಲಿ ಆದರ್ಶಗಳನ್ನು ಪ್ರೇರಿಸುವ ನಕ್ಷತ್ರಗಳು ನಮ್ಮ ಜೀವನವನ್ನು ರೂಪಿಸಲು ಸ್ವಲ್ಪಮಟ್ಟಿ ಗಾದರೂ ಕಾರಣವಾಗುವುದರಲ್ಲಿ ಸಂದೇಹ ತೋರುವುದಿಲ್ಲ. ಹೊಳೆಯುವ ಗುಣವುಳ್ಳ ವ್ಯಕ್ತಿಗಳು ನಕ್ಷತ್ರವೆಂಬ ಅಭಿದಾನಕ್ಕೆ ಪಾತ್ರರು. ಅಂಥ ಸದ್ಗುಣ ಗಳ ಸಂಪಾದನೆಗೆ ತಾರೆಗಳ ಪ್ರೇರಣೆ ದೊರೆತರೆ ಎಷ್ಟೋ ಕ್ಷೇಮವಾದೀತು?

— — — —

# ಮೇಘಮಾಲೆಯ ತೇಲುಮಂಚದಲ್ಲಿ

ತೂಗುಮಂಚದ ಕಾಲ ಮಾಯವಾಗಿ ಹೋಗುತ್ತಲಿದೆ. ನಾಲ್ಕಾರು ದಶಕಗಳ ಹಿಂದೆ ತೂಗಮಂಚ ಭೋಗಭಾಗ್ಯಗಳ ಪ್ರತೀಕವಾದಂತಿತ್ತು. “ ತೂಗು ಮಂಚ ತೂಗುವ ಮನೆ ” ಎಂದು ಶ್ರೀಮಂತರ ಮನೆಯನ್ನು ವರ್ಣಿಸುವ ಕಾಲವೊಂದಿತ್ತು. ದೊಡ್ಡ ಮನೆ; ದೊಡ್ಡ ಮನೆಯಲ್ಲಿ ದೊಡ್ಡ ಪಡಸಾಲೆ; ದೊಡ್ಡ ಪಡಸಾಲೆಯ ಎತ್ತರದ ಛತ್ತದಿಂದ ಇಳಿದ ಸರಪಳಿಯ ದೊಡ್ಡ ತೂಗುಮಂಚ—ಇವು ಮನೆಯ ದೊಡ್ಡಿಸ್ತಿಕೆಯನ್ನು ಸೂಚಿಸುವ ಲಕ್ಷಣಗಳಾಗಿದ್ದವು. ಆಗ ತೂಗುಮಂಚ ಶ್ರೀಮಂತರ ಸುಖದ ಸುಪ್ಪತ್ತಿಗೆಯನ್ನು ವ್ಯಕ್ತಮಾಡುತ್ತಿದ್ದಿತು.

ಆಗ ಒಟ್ಟಾಗಿ ಜೀವನ ಹಾಗಿರುತ್ತಿದ್ದಿತು. ಈಗಿನಂತೆ ಜನ ಆಗ ವೇಗದ ಬೆನ್ನು ಹತ್ತಿರಲಿಲ್ಲ. ತೂಗುಮಂಚ ನಿಧಾನವಾಗಿ ಮುಂದೆ ಸಾಗಿ ಅಷ್ಟೇ ನಿಧಾನವಾಗಿ ಹಿಂದೆ ಹೋಗುವಂತೆ ಜೀವನವು ಆಗ ನಿಧಾನವಾಗಿ ಗಂಭೀರವಾಗಿ ಸಾಗುತ್ತಿದ್ದಿತು. ಅಂದಿನ ಜೀವನದತೃಪ್ತಿ ತೂಗುಮಂಚದ ‘ ಜಿರ್ ’ ‘ ಜಿರ್ ’ ಎಂಬ ದನಿಯೊಡನೆ ದನಿಗೂಡಿಸುತ್ತಿತ್ತು.

ಆದರೆ ಒಂದೆರಡೇ ತಲೆಮಾರುಗಳಲ್ಲಿ ಅದೆಷ್ಟು ಬದಲಾವಣೆ ಬೀಸಿ ಹೋಗಿದೆ ಬಾಳಿನಲ್ಲಿ ! ಇಂದು ಮಂದಮಾರುತನಿಗೆ ಅವಕಾಶವಿಲ್ಲ. ಬೀಸುವುದೆಲ್ಲ ಬರಿ ಬಿರುಗಾಳಿ.

ತೂಗುಮಂಚದ ನೆನಪು ಬಂದಾಗ ನನ್ನ ಮನ ಅದೇಕೋ ಮುಗಿಲಿನತ್ತ ಧಾವಿಸುತ್ತದೆ–ಮಳೆಗಾಲದ ಮುಗಿಲಿನತ್ತ. ಆಕಾಶವು ಒಂದು ವಿಶಾಲವಾದ, ಉನ್ನತವಾದ ವಿಶ್ವಮಂದಿರದ ಛತ್ತ. ಮಳೆಗಾಲದಲ್ಲಿ ಆ ಛತ್ತದಿಂದ ಆಗಾಗ ಮೇಘಮಾಲೆಯ ತೂಗುಮಂಚ ಇಳಿಯುತ್ತದೆ. ಆಧುನಿಕ ಯುಗದ

ಹುಚ್ಚು ವೇಗದಿಂದ ಪಾರಾಗಲೆಳಸುವ ಭಾವಜೀವಿಗಳು ಮೇಘಮಾಲೆಯ ತೂಗುಮಂಚವನ್ನು ಏರಿ ತೂಗಿಕೊಳ್ಳಬಹುದು. ಮನೆಯ ತೂಗುಮಂಚ ಮಾಯವಾದರೂ ಮೇಘಮಾಲೆಯ ತೂಗುಮಂಚ ತನ್ನ ಋತುವಿನಲ್ಲಿ ಇಳಿವೇ ಇಳಿಯುವುದೊಂದು ದೊಡ್ಡ ಸಮಾಧಾನ.

ಜೋಕಾಲಿಯನ್ನು ಜೀಕುವ ಸಂಪ್ರದಾಯವನ್ನು ನಮ್ಮ ಹಿರಿಯರು ಮಳೆಗಾಲದ ಮಧ್ಯ ಭಾಗವಾದ ನಾಗಪಂಚಮಿಯಲ್ಲಿ ಏರ್ಪಡಿಸುದುದರಲ್ಲಿ ಅರ್ಥವುಂಟು. ಏಕೆಂದರೆ ಮೇಘಮಾಲೆಯ ಜೋಕಾಲಿ ಮುಗಿಲಿನಿಂದ ಇಳಿಯುವ ಕಾಲವದು. ಮುಗಿಲಿನ ಜೋಕಾಲಿಯೊಡನೆ ನೆಲದ ಜೋಕಾಲಿ ಸ್ಪರ್ಧಿಸಲಿ ಎಂದೇ ಈ ಸಂಪ್ರದಾಯ ರೂಢವಾಗಿರಬೇಕು.

ಆಗಸದ ನೀಲದಲ್ಲಿ ತುಂಡು ಮೋಡಗಳು ತೇಲುವುದನ್ನು ಕಂಡು ಮಾನವನಿಗೆ ವಿಮಾನದ ಕಲ್ಪನೆ ಬಂದಿತೇನೋ ! ಇಂದು ವಿಮಾನ ಕೇವಲ ಭಾವನಾ ಪ್ರಪಂಚದ ವಾಹನವಾಗಿ ಉಳಿಯದೆ ಸತ್ಯಪ್ರಪಂಚದ ವಾಹನ ವಾಗಿದೆ. ವಿಮಾನದ ಪ್ರಯಾಣ ಮೊದಲನೆಯ ಸಲ ತುಂಬಾ ಚಮತ್ಕಾರದ ಅನುಭವವನ್ನುಂಟು ಮಾಡಬಹುದೇನೋ ನಿಜ; ಆದರೆ ಬೇಗನ ಅದು ಸೊಗಸುಗುಂದಬಹುದು. ಮೇಘಯಾನದ ಮಾತೇ ಬೇರೆ. ಇವೆರಡಲ್ಲಿ ಯಾವು ದನ್ನು ನೀವು ಆಯ್ದುಕೊಳ್ಳುವಿರಿ ? ಎಂದು ಯಾರಾದರೂ ಕೇಳಿದರೆ ನನ್ನ ಉತ್ತರವನ್ನು ನೀವೇ ಕೊಡಬಹುದು.

ನಿಮ್ಮ ವಿಮಾನ ನಿಮಗಿರಲಿ. ನನಗೆ ನನ್ನ ತೂಗುಮಂಚವೇ ಸಾಕು. ನಿಮ್ಮ ವಿಮಾನ ಯಾನ ನಿಮ್ಮ ಮೈಮನಗಳಲ್ಲಿ ಗಾಳಿಯನ್ನು, ಗಾಳಿಯೊಡನೆ ಉತ್ಸಾಹವನ್ನು ತುಂಬುಬಹುದು. ನಿಮ್ಮ ಕೆಳಗೆ ಬಹು ದೂರ ಇಳೆಯ ಮೇಲಿನ ದೃಶ್ಯಗಳು ಚಲಚ್ಚಿತ್ರಗಳಂತೆ ವೇಗವಾಗಿ ಚಲಿಸಿ ಚಮತ್ಕಾರ ವನ್ನುಂಟು ಮಾಡಬಹುದು. ಆದರೆ ಅದೆಲ್ಲ ಕೆಲವು ನಿಮಿಷ ಮಾತ್ರ. ನೀವು ನಿಧಾನವಾಗಿ ನಿರೀಕ್ಷಿಸಬೇಕೆಂಬ ದೃಶ್ಯಗಳನ್ನು ನಿಮ್ಮ ಅತಿವೇಗದ ವಿಮಾನ ನೋಡುನೋಡುವುದರಲ್ಲಿ ಹಿಂದಕ್ಕೆ ತಳ್ಳಿ ಮುಂದೆ ಹಾರಿ ಹೋಗು ವುದು. ಆದರೆ ನಿಧಾನವಾಗಿ ಸಾಗುವ ಮೇಘವನ್ನು ಹತ್ತಿ ಪ್ರಯಾಣ

ಹೊರಡುವವರು ಕಲ್ಪನಾವಿಲಾಸವನ್ನೇ ಹತ್ತಿ ಹೊರಡುವರು. ಮ್ಯಾಜಿಕ್ ಕಾರ್ಪೆಟ್ಟಿನ ಸಮಾಚಾರವನ್ನು ಕೇಳಿಬಲ್ಲಿರಷ್ಟೇ ? ಮೇಘದ ತೂಗುಯ್ಯಾಲೆ ಮಾಜಿಕ್ ಕಾರ್ಪೆಟ್ಟನ್ನು ಮೀರಿಸುವಂತಹದು. ಅದರಲ್ಲಿ ಕುಳಿತು 'ಹೂಂ' ಎಂದರೆ ಸಾಕು, ಬಯಸಿದಲ್ಲೆಲ್ಲ ಅದು ನಿಮ್ಮನ್ನು ಸುತ್ತಿ ಸುಳಿಯಿಸಿಕೊಂಡು ಬರುವುದು.

ವಿಮಾನವು ಗಾಳಿಯನ್ನು ಸೀಳಿ ಹೋಗುತ್ತಿರುವಾಗ ತೂಗಿಕೊಂಡಂತೆ ಸುಖಾನುಭವವಾಗುವುದೋ ಇಲ್ಲವೋ ನನಗೆ ತಿಳಿಯದು. ಆದರೆ ಮೇಘ ಮಾಲೆಯ ತೇಲುಮಂಚದಲ್ಲಿ ಪಯಣ ಮಾಡಿನೋಡಿರಿ: ಅನುಪಮವಾದ ಸುಖಾನುಭವವುಂಟಾಗುವುದರಲ್ಲಿ ಸಂದೇಹವೇ ಇಲ್ಲ. ಅಷ್ಟು ಮೆತ್ತನೆಯ ಮಂಚ ಬೇರೆ ಇದ್ದೀತೇ? ಮೇಲಾಗಿ ಮೇಘದ ಗತಿ ಎಷ್ಟೊಂದು ವೈಖರಿಯ ಗತಿ !

ಮೇಘ ಮಾಲೆಯ ತೇಲುಮಂಚದ ವರ್ಣವಿಲಾಸವಂತೂ ವರ್ಣನೆಗೆ ಅಸದಳವಾದುದು. ನಿಮಿನಿಮಿಷಕ್ಕೂ ಅದು ಹೊಸ ಹೊಸ ಬಣ್ಣ ಬೆಡಗು ಗಳನ್ನು ತೋರುವುದು. ಮೇಘಮಾಲೆಗೆ ಹೀಗೆ ಯಾರು ಬಣ್ಣ ಬಣ್ಣಗಳನ್ನು ಬರೆಯುವರೋ ಯಾರಿಗೆ ಗೊತ್ತು? ಸೂರ್ಯನನ್ನು ಮೀರಿದ ಇನ್ನಾವುದೋ ಒಂದು ಮಾಯೆಯಿಂದಾಗಿ ಇಂಥ ರಂಗು ರಂಗಿನ ತರಂಗ ಮೂಡಿ ಮರೆ ಯಾಗುತ್ತಿರಬೇಕು.

ಬಿಳಿಮೋಡದ ಮಂಚ ಬೆಳುದಿಂಗಳಲ್ಲಿ ತೇಲಿದರಂತೂ ತೀರಿತು. ಅದರ ಚೆಲುವಿನ ಸೆಳೆತಕ್ಕೆ ಸಿಲುಕಿದವರು ದುರ್ದೈವಿಗಳೆಂದೇ ಹೇಳಬೇಕು. ಮೇಘಮಾಲೆ ತೇಲಿದಂತೆ ಚಂದ್ರನೂ ಬೆರಗಾಗಿ ನೋಡುತ್ತ ನಿಲ್ಲುತ್ತಾನೆ. ಉಳಿದವರ ಮಾತೇನು?

ತೂಗುಮಂಚದಲ್ಲಿ ಕುಳಿತು ತೂಗಿಕೊಳ್ಳುವ ಭಾಗ್ಯವನ್ನು ಸತ್ಯ ಪ್ರಪಂಚದಲ್ಲಿ ಪಡೆಯದವರು ಸ್ವಪ್ನ ಲೋಕದಲ್ಲಿ ಪಡೆದು ಸಮಾಧಾನ ಮಾಡಿಕೊಳ್ಳುತ್ತಾರೆ ಎಂದು ಹೇಳುವವರಿದ್ದಾರೆ. ನಾನದನ್ನು ಒಪ್ಪಲಾರೆ. ಅಂತರಂಗ ತೂಗಿಕೊಳ್ಳುವ ತೂಗುಮಂಚ ಬರಿ ಸಮಾಧಾನದ ತೂಗುಮಂಚ ವಲ್ಲ. ತೂಗುಮಂಚ ಸಂಪತ್ತನ್ನು ಸೂಚಿಸುವದೆಂದು ಈ ಮೊದಲೆ

ಹೇಳಿದೆನಷ್ಟೇ ? ಮೇಘ ಮಾಲೆಯಲ್ಲಿ ತೂಗುಮಂಚವನ್ನು ಕಾಣಬಲ್ಲ ದೃಷ್ಟಿ ಅದಕ್ಕೂ ಹೆಚ್ಚಿನ ಸಂಪತ್ತನ್ನು ಸೂಚಿಸುತ್ತದೆ. ಒಂದು ಬಾಹ್ಯ ಸಂಪತ್ತು ಇನ್ನೊಂದು ಅಂತರಂಗ ಸಂಪತ್ತು. ಹೊರಗೆ ತೂಗುವ ತೂಗುಮಂಚ ತೂಗದಂತೆ ನಿಂತು ಬಿಡಬಹುದು. ಆದರೆ ಮೇಘಮಾಲೆಯ ತೂಗುಮಂಚ ಒಮ್ಮೆ ದೊರೆತರೆ ಸಾಕು. ಅದು ಸದೈವ ನಮ್ಮದಾಗಿಯೇ ಉಳಿಯುವುದು.

ಅಂತರಂಗ ತೂಗಿಕೊಳ್ಳುವ ತೂಗುಮಂಚ ದೊರೆಯಬೇಕಾದರೆ ಪರಿಶ್ರಮದಿಂದ ಪಡೆದ ಪುಣ್ಯ ಬೇಕು. ಚಿತ್ತಶುದ್ಧಿಯಿಂದ ಚಿತ್ತಸಿದಿಯನ್ನು ಮಾಡಿಕೊಂಡವರಿಗೆ ಮಾತ್ರ ಮೇಘಮಾಲೆಯ ತೇಲುಮಂಚದ ಸುಖಾನುಭವ ಸಾಧ್ಯ.

———

# ಪಕ್ಷಿ ಪ್ರಪಂಚದಲ್ಲಿ

"ಚಿಲಿಮಿಲಿಯೆಂದೋದುವ ಗಿಳಿಗಳಿರಾ, ನೀವು ಕಾಣಿರೆ? ನೀವು ಕಾಣಿರೆ? ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ? ನೀವು ಕಾಣಿರೆ?...... ಕೊಳನ ತಡಿಯೊಳಗಾಡುವ ಹಂಸೆಗಳಿರಾ ನೀವು ಕಾಣಿರೆ? ನೀವು ಕಾಣಿರೆ? ಗಿರಿ ಗಹ್ವರದೊಳ ಗಾಡುವ ನವಿಲುಗಳಿರಾ ನೀವು ಕಾಣಿರೆ? ನೀವು ಕಾಣಿರೆ? ಚೆನ್ನಮಲ್ಲಿಕಾರ್ಜುನ-ನೆಲ್ಲಿದ್ದಹನೆಂದು ನೀವು ಹೇಳಿರೆ, ನೀವು ಹೇಳಿರೆ"

ಮಹಾದೇವಿಯಕ್ಕನವರು

ಪ್ರಪಂಚ ಹಾಗು ಪಾರಮಾರ್ಥಗಳ ಸಂಬಂಧವನ್ನು ಹೇಳಿದರೆ ಪಕ್ಷಿಗಳೇ ಹೇಳಬೇಕು. ಏಕೆಂದರೆ ಅವು ಇಳೆಯೊಳಗಾಡುವಂತೆ ಬಾಂದಳ ದಲ್ಲಿಯೂ ಆಡಬಲ್ಲವು. ಇಹದ ಸಂದೇಶವನ್ನು ಪರಕ್ಕೆ ಸಾರುವಂತೆ ಪರದ ಸಂದೇಶವನ್ನು ಇಹದಲ್ಲಿ ಅವು ಬೀರಬಲ್ಲವು. ಪಕ್ಷಿಗಳಿಗೆ ಇಹ ಪರಗಳೆರಡೂ ಲಕ್ಷ್ಯಗಳಾಗಿವೆ. ಆದುದರಿಂದಲೇ ಆಧ್ಯಾತ್ಮದ ದಾರಿಯನ್ನು ಹುಡುಕು ವವರು ಹಕ್ಕಿಗಳನ್ನು ಮೊರೆ ಹೊಕ್ಕುದುಂಟು. ಹಾಗಿಲ್ಲದೆ ಹೋದರೆ ಕೆಳಗಿ ನವರು ಕೆಳಗೇ ಉಳಿದು ಮೇಲಿನವರು ಮೇಲೆಯೇ ಉಳಿದಾರು! ಮೇಲಿನ ಬಾಳಿನ ಸಂಪರ್ಕವಿಲ್ಲದೆ ಕೆಳಗೇ ಉಳಿಯುವುದು ಎಷ್ಟು ಕಷ್ಟವೋ ಕೆಳಗಿ ನವರ ಸಂಪರ್ಕವಿಲ್ಲದೆ ಮೇಲೆಯೇ ಉಳಿಯುವವರ ಬಾಳೂ ಅಷ್ಟು ಕಷ್ಟ.

ಗಿಳಿಯನ್ನು ಗಿಣಿರಾಮನೆಂದು ಕರೆಯುವ ಸಂಪ್ರದಾಯವನ್ನು ಇಲ್ಲಿ ಗಮನಿಸಬೇಕು. ಆ ಸಂಪ್ರದಾಯದಲ್ಲಿ ಅರ್ಥವಿಲ್ಲದೆ ಇಲ್ಲ. ರಾಮನು ಮಾನವನಾಗಿ ಬಂದು ಮಾನವನಿಗೆ ದೇವತ್ವದ ನೆಲೆ ಕಲೆಯನ್ನು ತೋರಿಸಿ ದವನು. ದೇವಲೋಕದ ಸಂದೇಶವನ್ನು ಬೀರಿದವನು. ಅದರಂತೆ ಗಿಳಿರಾಮ ಅಂತರಿಕ್ಷದಲ್ಲಿ ಹಾರಾಡಿ ಭೂಮಿಗೆ ಸಂದೇಶವನ್ನು ತರುವ ಪಕ್ಷಿ, ಗಿಳಿ ತಕ್ಕ ಮಟ್ಟಿಗೆ ಮಾತನಾಡಬಲ್ಲ ಮುದ್ದು ಹಕ್ಕಿ ಎಂಬುದನ್ನು ಇಲ್ಲಿ ಲಕ್ಷಿಸಬೇಕು.

'ಮಧುರ ಚೆನ್ನ'ರು 'ನನ್ನ ನಲ್ಲ'ನನ್ನು ಅರಸುವಾಗ ಗಿಣಿರಾಮನನ್ನು ಉದ್ದೇಶಿಸಿ ಹಾಡುವ ಪದ್ಯ ಈ ಭಾವನೆಯನ್ನು ಸಮರ್ಥಿಸುವಂತಹದಾಗಿದೆ.

ಮಾಣಿಕದ ಮೂಗಿನವ ಮೈ ಪಚ್ಚ ರತ್ನದವ
ಹಣ್ಣು ಕುಕ್ಕುತ ಹಾರುವಣ್ಣ ಬಾರೋ
ಜಾಣ ರಂಗಯ್ಯ ತಾ ಕಾಣದಡಗಿದನೆಲ್ಲಿ ?—
ಗಿಣಿರಾಮ ನೀನಾರೆ ಸುದ್ದಿ ಬೀರೋ.

ಮಾತನಾಡಬಲ್ಲ ಗಿಣಿರಾಮ ಪಕ್ಷಿಕುಲದ ಪ್ರತಿನಿಧಿಯೆಂದು ತಿಳಿದರೆ ಸಾಕು.

ದೇವಲೋಕ ಹಾಗು ಮಾನವ ಲೋಕಗಳಲ್ಲಿ ಮಾತ್ರವಲ್ಲ, ನಿಸರ್ಗ ಹಾಗು ಮಾನವ ಪ್ರಪಂಚಗಳಲ್ಲಿ ಮಧುರ ಬಾಂಧವ್ಯವನ್ನು ಏರ್ಪಡಿಸುವ ಮಹತ್ಕಾರ್ಯದಲ್ಲಿ ಪಕ್ಷಿಗಳು ವಹಿಸುವ ಪಾತ್ರ ಗಣ್ಯವಾದುದು, ಬನದ ಬಿನದವನ್ನು ದಿನ ದಿನವೂ ಅವು ಮನೆ ಮನೆಗೆ, ಮನ ಮನಕ್ಕೆ ಕೊಂಡೊಯ್ಯುವವೆಂಬುದು ನಮ್ಮ ನಿಮ್ಮ ನಿತ್ಯದ ಅನುಭವವೇ ಆಗಿದೆ. ಗುಬ್ಬಿ ಮೊದಲಾದ ಹಕ್ಕಿಗಳಂತೂ ನಮ್ಮ ದೈನಂದಿನದ ಒಡನಾಡಿಗಳು. ಅವುಗಳ 'ಚಿಲಿಪಿಲಿ' ಗೆಳೆಯರ ಉಲಿಯಂತೆ ನಮ್ಮ ಎದೆಗೆ ಇಂತೆಂದು ಹೇಳಲಾಗದ ಒಂದು ಸಂತಸವನ್ನು ಉಂಟುಮಾಡುವುದಿಲ್ಲವೇ? ಹಕ್ಕಿಗಳ ಚಿಲಿಪಿಲಿಯನ್ನು ಮೆಚ್ಚದವನ ಬಾಳು ಬಚ್ಚ ಬರಿದು. ಅಂಥವನು ಕಣ್ಣಿದ್ದೂ ಕುರುಡ; ಕಿವಿಯಿದ್ದೂ ಕಿವುಡ, ಮನವಿದ್ದೂ ಮೂಢ, ನಿತ್ಯ ನಿತ್ಯ ಪ್ರಾತಃಕಾಲದಲ್ಲಿ ಮಂಗಲಗೀತ ನಡೆಯುತ್ತದೆ ಪಕ್ಷಿಗಳಿಂದ. ಎಷ್ಟು ಸರಸವಾದ, ಎಷ್ಟು ಸಹಜವಾದ, ಎಷ್ಟು ಸರಲವಾದ ಪ್ರಾರ್ಥನೆಯದು ! ದಿನ ದಿನವೂ ಹೊಸ ಹೊಸ ಹುಮ್ಮಸವನ್ನು ಹೊಮ್ಮಿಸುವ ಬೆಳಗನ್ನು ದಯಪಾಲಿಸುವ ಲೋಕಪಾಲಸಿಗೆ ಇದಕ್ಕಿಂತಲೂ ಮಿಗಿಲಾದ ಕೃತಜ್ಞತೆಯನ್ನು ಸಲ್ಲಿಸುವುದು ಸಾಧ್ಯವೇ ?

ಪ್ರಕೃತಿಯ ಚೈತನ್ಯವೇ ಮೈವತ್ತಿಂತಿರುತ್ತವೆ ಪಕ್ಷಿಗಳು. ಅವುಗಳಲ್ಲಿ ಕೀಡುವ ಉತ್ಸಾಹ ಇನ್ನಾವ ಜೀವಿಗಳಲ್ಲಿ ತಾನೇ ತೀಡಬಲ್ಲದು? ಹಕ್ಕಿಗಳು ತಮ್ಮ ಹಾಡಿನಲ್ಲಿ ತೋಡುವ ಜೀವನದ ಅನುರಾಗವನ್ನು ಇನ್ನಾವ

ಪ್ರಾಣಿಗಳು ತಾನೇ ತೋಡಬಲ್ಲವು ? ಅವುಗಳ ಉಲ್ಲಾಸ ಅವುಗಳದೇ. ಬೇಸರವೆಂಬುದನ್ನೇ ಅವು ಅರಿಯವು. ಅವು ತಮ್ಮ ಗತಿ ಗೀತಗಳ ಮೂಲಕ ಜೀವನೋತ್ಸಾಹದ ಸಂದೇಶವನ್ನು ಸದಾ ಸಾರುತ್ತವೆ. ಅವುಗಳ ಗತಿಗೆ ಕಣ್ದೆರೆಯಬಲ್ಲವರು; ಅವುಗಳ ಗೀತಕ್ಕೆ ಕಿವಿದೆರೆಯಬಲ್ಲವರು, ಅವುಗಳ ಚಿತ್ತ ಪ್ರಸನ್ನತೆಗೆ ಚಿತ್ತವನ್ನು ತೆರೆಯಬಲ್ಲವರು ಬಾಳಿನ ಗುರಿ ಹಾಗು ದಾರಿಗಳನ್ನು ಗುರುತಿಸಬಹುದು.

ಪ್ರಕೃತಿ ಜೀವನಕ್ಕೆ ಹಾಗು ಮಾನವ ಜೀವನಕ್ಕೆ ರಾಗ ರಂಗಗಳನ್ನು ಒದಗಿಸುವಲ್ಲಿ ಹಕ್ಕಿಗಳು ಆಡುವ ಪಾತ್ರ ನಿಜವಾಗಿಯೂ ಹಿರಿದು. ಹೂಗಳಿಂದ ಹೇಗೋ ಹಾಗೆ ಹಕ್ಕಿಗಳಿಂದ ನಿಸರ್ಗ ರಂಗುವಡೆಯುವುದು. ಎಷ್ಟು ಬಗೆಯ ಬಣ್ಣಗಳು ಸೂರೆಯಾಗಿವೆ ಹಕ್ಕಿಗಳ ರೆಕ್ಕೆಗಳಿಗಾಗಿ ! ನವಿಲು ಗರಿಗೆದರಿ ಕುಣಿಯುವಾಗ ಅದು ಹರಡುವ ವರ್ಣಜಾಲವನ್ನು ಕಂಡು ಕೌತುಕ ಪಡದವರಾರು? ಗಿಳಿಯ ತಿಳಿಯ ಹಸುರು, ಹಂಸದ ಅಚ್ಚ ಬೆಳ್ಪು, ಪಾರಿವಾಳಗಳ ಪರಿಪರಿಯ ನುಣ್ಣನೆಯ ಬಣ್ಣಗಳ ಬೆಡಗು ಕಣ್ಣಿಗೆ ಎಸೆದಾಗ ಮೆಚ್ಚದ ಮನವುಂಟೇ? ಹಕ್ಕಿಗಳ ಮೈ ಬಣ್ಣ ಬಗೆಬಗೆಯಾಗಿರುವಂತೆ ಅವುಗಳ ಕಂಠ ಸ್ವರವೂ ವಿವಿಧ. ವಸಂತ ಋತುವಿನಲ್ಲಂತೂ ಹಕ್ಕಿಗಳ ಸ್ವರಕ್ಕೆ ಹೆಚ್ಚಿನ ಸೊಗಸು ಪ್ರಾಪ್ತವಾಗುತ್ತದೆ. ಆಗ ಬನದ ಬಿನದ ಅವುಗಳ ದನಿಯಲ್ಲಿ ನಿನಾದಗೊಳ್ಳುವಂತೆ ಭಾಸವಾಗುತ್ತದೆ. ಪಕ್ಷಿಗಳ ಸ್ವಚ್ಛಂದ ಸುಂದರ ಹಾಗು ಬಂಧುರ ನಿನಾದಕ್ಕೆ ಮನಸೋತು ಕವಿ ಬೇಂದ್ರೆ ಹೀಗೆ ಹಾಡಿದ್ದಾರೆ:

ನೂರು ಮರ ನೂರು ಸ್ವರ
ಒಂದೊಂದೂ ಅತಿಮಧುರ
ಬಂಧವಿರದೆ ಬಂಧುರ
ಸ್ವಚ್ಛಂದ ಸುಂದರ.

ಪಕ್ಷಿಗಳ ಕೂಜನದಿಂದ ಪ್ರಕೃತಿ ಪುಳಕವೇರುವಂತೆ ಚಿತ್ತ ದಳವೇರುತ್ತದೆ. ಆದುದರಿಂದಲೇ ಕುವೆಂಪು ಹೀಗೆ ಹಾಡಿದ್ದಾರೆ:

ಆಃ ಮತ್ತದೊಮ್ಮೆ ಉಲಿ
ಹಕ್ಕಿ ಮತ್ತದೊಮ್ಮೆ ನಲಿ
ಬತ್ತಿದೆದೆಗೆ ಬರಲಿ ನಿನ್ನ ಗಾನದೊಳ್ಸರಿ
ಹಾಡು ಮತ್ತದೊಮ್ಮೆ ಹಕ್ಕಿ
ನಿನ್ನ ಪ್ರಾಣಲಹರಿಯುಕ್ಕಿ
ಜಗತ್ ಪ್ರಾಣನಾಡಿಯಲ್ಲಿ ಹರುಷ ಹರಿಯಲಿ.

ವರ್ಣ ಹಾಗು ಸ್ವರಗಳ ಮಾತಂತಿರಲಿ. ಒಂದೊಂದು ಪಕ್ಷಿಗೆ ಅದರದೇ ಆದ ಒಂದು ಅಂದವಾದ ಬೆಡಗು ಬಿನ್ನಾಣವುಂಟು. ಹಂಸಕ್ಕೆ ಚಲಿಸುವ ಬೆಡಗು; ನವಿಲಿಗೆ ಕುಣಿಯುವ ಬೆಡಗು; ಗುಬ್ಬಿಗೆ ನೆಗೆವ ಬೆಡಗು. ಪಾರಿವಾಳಕ್ಕೆ ಹಾರುವ ಬೆಡಗು, ಗರುಡನಿಗೆ ಮುಗಿಲಿಗೇರುವ ಬೆಡಗು, ಇನ್ನು ಕೆಲವು ಹಕ್ಕಿಗಳಿಗೆ ಆಗಸದಲ್ಲಿ ಸುಮ್ಮನೆ ತೇಲುವ ಬೆಡಗು: ಹೀಗೆ. ಗುಬ್ಬಿ ಆಡದ ಅಂಗಳ, ಹಂಸ ನಡೆಗೊಳದ ಕೊಳ, ನವಿಲು ಕುಣಿಯದ ಬನ, ಹಾರುವ ಸಾಲು ಹಕ್ಕಿಗಳನ್ನು ತೋರದ ಗಗನ ಮೆರೆಯಲಾರವು.

— — — —

# ಕಾರವಾರದ ಕಡಲ ತೀರದಲ್ಲಿ

ನೆನಪಿನ ಸವಿಯೋ ಸವಿಯೆಂದು ಹೇಳಬಹುದು. ಒಮ್ಮೊಮ್ಮೆ ದುಃಖದ ನೆನಪೂ ಮಧುರವಾಗಿರುವುದೆಂದ ಬಳಿಕ ಸುಖದ ನೆನಪು ಎಷ್ಟು ಸವಿಯಾಗಿರಬೇಡ ? ನನ್ನ ಸವಿ ನೆನಪುಗಳಲ್ಲಿ ಕಾರವಾರದ ನೆನಪು ಜೇನ ತುಪ್ಪ; ಅಥವಾ ಕವಿಯೊಬ್ಬನ ರಸವಾಣಿಯಲ್ಲಿ ಹೇಳಬೇಕಾದರೆ ಅದು ನನ್ನ ಅಂತರಂಗದ " ಭರಣೀಲಿಟ್ಟಂಗ್ಯೈತೆ ಆಲೂ ಸಕ್ರೆ ತುಪ್ಪ ! " ನಾನು ಕಾರ ವಾರದಲ್ಲಿದ್ದುದು ಎರಡು ವರುಷಗಳ ಅವಧಿ. ಆ ಅವಧಿ ಮುಗಿದು ಹೋಗಿ ಈ ಮೂರು ವರುಷಗಳ ಮೇಲಾಗುತ್ತ ಬಂದಿದೆ. ಆದರೂ ಕಾರವಾರದ ಚಿತ್ರ ನನ್ನ ಚಿತ್ತ ಭಿತ್ತಿಯಲ್ಲಿ ಅಚ್ಚೊತ್ತಿದಂತಿದೆ. ಅದನ್ನು ನಾನು ಸತ್ಯದಲ್ಲಿ ಕಂಡಾಗ ಸ್ವಪ್ನಸುಂದರವಾಗಿ ತೋರಿತು. ಅದರ ಸೌಂದರ್ಯ ಸ್ವಪ್ನ ರಾಜ್ಯದ ಸೌಂದರ್ಯದಂತಿತ್ತು. ಈಗ ಆ ಸ್ವಪ್ನವು ನನ್ನ ಪಾಲಿಗೆ ಸತ್ಯ ಸುಂದರವಾಗಿದೆ. ಆ ಸ್ವಪ್ನದ ಸೌಂದರ್ಯವು ಸತ್ಯವಾಗಿ ಪರಿಣಮಿಸಿದೆ. ಕಾರವಾರದ ಮೃದು ಮಧುರ ನೆನಪುಗಳು ನನ್ನ ಅಂತರಂಗದಲ್ಲಿ ತೆರೆತೆರೆ ಯಾಗಿ ತೆರೆದಾಗ ಕೀಟ್ಸ್ ಕವಿಯ " A thing of beauty is a joy for ever " ಎಂಬ ನುಡಿಗೆ ನನ್ನ ಎದೆ ಮಾರ್ದನಿಗೊಡುತ್ತದೆ.

ಕನ್ನಡ ನಾಡಿನ ಸಮುದ್ರ ತೀರದ ಸೊಗಸನ್ನು ಸವಿಯ ಬಯಸು ವವರು ಕಾರವಾರಕ್ಕೆ ಹೋಗಬೇಕು. ಕಾರವಾರವು ಉತ್ತರ ಕನ್ನಡ ಜಿಲ್ಲೆಯ ಮುಖ್ಯಸ್ಥಳ. ಜಿಲ್ಲೆಯ ಸ್ಥಳವಾದರೂ ಊರು ಅಷ್ಟೇನು ದೊಡ್ಡ ದಲ್ಲ. ದಕ್ಷಿಣೋತ್ತರವಾಗಿ ಉದ್ದಕ್ಕೆ ಕಿರಿಯಗಲಾಗಿ ವ್ಯಾಪಿಸಿದೆ ಊರು. ಪೂರ್ವಕ್ಕೆ ಹಸುಹಸುರಾಗಿ ಏರಿ ಹೋಗುವ ಮಲೆಗಳ ಸಾಲು. ಪಶ್ಚಿಮಕ್ಕೆ ಬೆಳ್ನೊರೆಯ ಅಂಚಿನೊಂದಿಗೆ ಒಂದೇಸವನೆ ಏರಿ ಬಂದು ಸರಿದು ಹೋಗುವ ಅಲೆಗಳ ಕ್ರೀಡಾಂಗಣದಂತಿದ್ದ ವಿಶಾಲವಾದ ನೀಲವರ್ಣದ ಸಮುದ್ರ. ಕಾರವಾರವು ಈ ಇಬ್ಬದಿಯ ಸೌಂದರ್ಯದ ಮಧ್ಯದಲ್ಲಿ ಸೆರೆಸಿಕ್ಕಂತಿದೆ,

ಅದರ ಸುತ್ತಲೂ ಚೆಲುವು ನಗುವಂತಿದೆ. ಜಿಲ್ಲೆಯ ಸ್ಥಳದ ದೃಷ್ಟಿಯಿಂದ ಚಿಕ್ಕದಾದರೂ ಕಾರವಾರವು ಮಾಟವಾದ ಊರು. ಎರಡೋ ಮೂರೋ ದೊಡ್ಡ ರಸ್ತೆಗಳು ದಕ್ಷಿಣೋತ್ತರವಾಗಿ ಊರ ಉದ್ದಕ್ಕೂ ಹೋಗಿವೆ. ಈ ದೊಡ್ಡ ರಸ್ತೆಗಳನ್ನು ಮನೆ ಮನೆಗಳಾಗುವಂತೆ ಅಲ್ಲಲ್ಲಿ ವಿಭಾಗಿಸುವ ಅಡ್ಡ ರಸ್ತೆಗಳೇ ಬಹಳ. ರಸ್ತೆಗಳ ಮೇಲೆಲ್ಲ ಸಮುದ್ರ ತೀರದ ಮಳಲು ಹರಡಿ ಕೊಂಡಿರುತ್ತದೆ. ಹಾಳು ಮಣ್ಣು ಅಲ್ಲಿ ಹುಡುಕಿದರೂ ಸಿಕ್ಕದು. ಆದು ದರಿಂದ ಹುಡಿಹಾರಿ ಕಣ್ಣು ತುಂಬ ಸೇರಿಕೊಳ್ಳುವುದಕ್ಕೂ ಬಟ್ಟೆಗಳ ಮೇಲೆ ದಪ್ಪವಾಗಿ ಬಣ್ಣ ಬಳೆಯುವುದಕ್ಕೂ ಅಲ್ಲಿ ಅವಕಾಶವಿಲ್ಲ. ಮಳೆ ಗಾಲದಲ್ಲಿ ಓಡಾಡುವ ವಾಹನಗಳು, ಅದರಲ್ಲಿಯೂ ಮೋಟಾರುಗಳು, ಪಥಿಕರ ಮೇಲೆ ಕೆಸರೆರಚುವದಕ್ಕಂತೂ ಅಲ್ಲಿ ಆಸ್ಪದವಿಲ್ಲ; ಎಲ್ಲವೂ ನಿರ್ಮಲ; ನಿರ್ಮಲ.

ಮನೆಮನೆಯ ಸುತ್ತ ಎತ್ತರವಲ್ಲದ ಗೋಡೆ; ಮನೆಯ ಮುಂದಾಗಲಿ ಹಿಂದಾಗಲಿ ಒಂದು ಚಿಕ್ಕ ಹೂದೋಟ; ಮನೆಮನೆಗೂ ಒಂದು ಬಾವಿ; ಮುಂದೆ ಹೂದೋಟವಿರುವ ಮನೆಗಳೇ ಬಹಳ. ಮನೆಮನೆಯ ತೋಟದಲ್ಲಿ ಹಾಗು ಮಗ್ಗುಲಲ್ಲಿ ತೆಂಗಿನ ಮತ್ತು ಅಡಿಕೆಯ ಗಿಡಗಳನ್ನು ಕಾಣಬಹುದು; ಹೂದೋಟಗಳಲ್ಲಿ ಹೂಗಿಡಗಳಂತೂ ಸರಿಯೇ ಸರಿ. ಕಾರವಾರದ ಜನರಿಗೆ, ಅದರಲ್ಲಿಯೂ ಹೆಣ್ಣುಮಕ್ಕಳಿಗೆ, ಹೂಗಳೆಂದರೆ ಬಲು ಹಿಗ್ಗು; ಬಿಳಿಯ ಹೂಗಳ ಮೇಲೆಯಂತೂ ಅವರಿಗೆ ಪ್ರೀತಿ ಬಹಳ. ಹೂ ಮುಡಿಯದ ಹೆಣ್ಣುಮಕ್ಕಳು ಆ ಊರಲ್ಲಿ ಸಿಕ್ಕುವುದಿಲ್ಲವೆಂದೇ ಹೇಳಬಹುದು; ಬಡವ ರಿರಲಿ, ಬಲ್ಲಿದರಿರಲಿ; ಎಲ್ಲರೂ ಹೂ ಮುಡಿಯುವವರೇ. ಹೀಗಿದ್ದ ಮೇಲೆ ನಿತ್ಯ ಸಂಜೆ ಮುಂಜಾವುಗಳಲ್ಲಿ ಹೂವಿನ ಮಾರಾಟವು ಕಾರವಾರದ ಓಣಿ ಓಣಿಗಳಲ್ಲಿ ನಡೆಯುತ್ತಿದ್ದರೆ ಆಶ್ಚರ್ಯವೇನು ? ಬೀದಿ ಬೀದಿಗಳಲ್ಲಿ ಅಲೆ ಅಲೆದು ಹೂ ಮಾರುವ ಬಡ ಹೆಣ್ಣುಮಕ್ಕಳು ತಲೆಯಲ್ಲಿ ಹೂ ಮುಡಿದು ಕೊಂಡೇ ಹೂ ಮಾರುತ್ತಿರುವುದನ್ನು ಕಾಣಬಹುದು. ಕೈಯಲ್ಲಿ ವಿಶೇಷತಃ ' ಕಳಿಚೆಂಡು ' ವಿನ ಮೊಗ್ಗೆಯ ಮಾಲೆಗಳು ದೃಷ್ಟಿಗೋಚರವಾಗುತ್ತವೆ, ಕಳಿಚೆಂಡು ನಸುಗೆಂಪು ಸಿಂಪಡಿಸಿದಂತಿರುವ ಬಿಳಿಯ ಬಣ್ಣದ ಹೂ; ಕಳಿ

ಚೆಂಡುವಿನ ಮೊಗ್ಗೆಯ ಮಾಲೆ ಮುಡಿದನಂತರ ಹೂಮಾಲೆಯಾಗು ತ್ತದೆ ಹೆರಳಿನಲ್ಲಿ.

ಇನ್ನು ಕಾರವಾರದ ಸಮುದ್ರತೀರ ಕಾರವಾರದ್ದೇ. ಏನು ನುಣ್ಣ ನೆಯ ಮಳಲದು! ಎಷ್ಟು ಅಂದವಾಗಿ ಕಡಲ ದಂಡೆಗುಂಟ ಹರಡಿಕೊಂಡಿ ರುತ್ತದೆ! ಆ ಮಳಲು ಒಮ್ಮೆ ನೋಡಿದರೆ ಎಂದೆಂದಿಗೂ ಮರೆಯ ದಂತಹದು. ಅ ಮೆತ್ತನೆಯ ಮಳಲ ಹರವು ಅರಸಿಕರಿಗೂ ರಸಿಕತೆಯ ಕಥೆ ಹೇಳುವುದು! ಅದರ ಮೇಲೆ ನಡೆದು ನೋಡಬೇಕು; ಗೆಳೆಯರೊಡನೆ ಆಡಿನೋಡಬೇಕು. ಸಾಲದೆ ಹೋದರೆ ಓಡಾಡಿ ನೋಡಬೇಕು; ಅಂದರೆ ಮಾತ್ರ ಅದರ ಸೊಗಸಿನ ಕಲ್ಪನೆಯಾಗಬಹುದು. ಬೆಳುದಿಂಗಳ ರಾತ್ರಿ ಯಲ್ಲಿ ಅಲೆಗಳ ನೊರೆ ಮುತ್ತಿನ ಬಣ್ಣವನ್ನು ತಳೆದಾಗ ಚಕಚಕನೆ ಹೊಳೆ ಯುವ ಆ ಮಳಲದಾರಿಯ ಮೇಲೆ ಸುಮ್ಮನೆ ಅಲೆದು ನೋಡಬೇಕು; ಸ್ವಪ್ನರಾಜ್ಯದಲ್ಲಿ ಸುಳಿದಂತಾಗುತ್ತದೆ.

ಅದೇ ಮಳಲದಂಡೆಯಾದರೂ ದಿನದಿನಕ್ಕೆ ಒಂದೊಂದು ಹೊಸ ಅಂದವನ್ನು ತಾಳುತ್ತದೆ. ಒಂದು ದಿನ ಮಳಲು ಒಮ್ಮೆಲೆ ಪೊಳ್ಳಾಗಿ ಅಲೆ ದಾಡುವವರ ಕಾಲು ಕುಸಿದರೆ ಇನ್ನೊಂದು ದಿನ ಅದು ಹೇಗೋ ಗಟ್ಟಿ ಗೊಂಡು ಕಾಲು ಚಕ್ಕಚಕ್ಕನೆ ಚಲನೆಗೊಳ್ಳುತ್ತವೆ. ಒಂದು ದಿನ ಸಂಜೆ ಯಲ್ಲಿ ಮಳಲದಂಡೆ ಕಿರಿಯಗಲಾಗಿದ್ದರೆ ಮಾರನೆಯ ದಿನ ಬೆಳಗಿನಲ್ಲಿ ಅದರ ಹರವು ಹಿಗ್ಗಿರುವುದುಂಟು. ತೆರೆಗಳ ಅಲೆದಾಟದಿಂದಲೋ ಕಡಲಿನ ಏರಿಳಿತದಿಂದಲೋ ಹವೆಯೊಳಗಣ ಹೆಚ್ಚು ಕಡಿಮೆಯಿಂದಲೋ ಕಡಲ ದಂಡೆ ದಿನದಿನವೂ ಚಿತ್ರವಿಚಿತ್ರ ರೂಪಗಳನ್ನು ತಾಳುತ್ತದೆ. ಒಂದು ಇರುಳಿ ನಲ್ಲಿ ಅದೇನು ಇಂದ್ರಜಾಲ ನಡೆದು ಹೋಗುವುದೋ ಏನೋ! ಮರುದಿನ ಹಗಲಿನಲ್ಲಿ ಬಗೆಬಗೆಯ ಶಂಖಶಿಂಪುಗಳು ರಾಶಿರಾಶಿಯಾಗಿ ಮಳಲಿನ ಹರ ಹಿನ ಮೇಲೆ ಹರಡಿಕೊಂಡಿರುತ್ತವೆ.

ಕಡಲಹಕ್ಕಿಗಳು ಎಡೆಯಾಡುತ್ತಿದ್ದರಂತೂ ತೀರಿಯೇಹೋಯಿತು; ಸಮುದ್ರ ತೀರದ ಚೆಲುವೇ ಚೆಲುವು. ಬಹುಶಃ ಪ್ರಾತಃಕಾಲದಲ್ಲಿ ಈ

ಶುಭ್ರ ಶ್ವೇತಪಕ್ಷಿಗಳ ಸಂದರ್ಶನವಾಗುವುದು. ವಿಧವಿಧವಾದ ಸಾಲು ಗಳನ್ನು ರಚಿಸಿ ಸಮುದ್ರದ ಮೇಲೆ ಹಾರುವ ಆ ವಿಹಗಗಳ ಹಾರಾಟವು ರಮಣೀಯವಾಗಿರುವುದು. ಅವುಗಳ ಅತ್ಯಂತ ಮನೋಹರವಾದ ಸೌಂದ ರ್ಯವು ಕಾಣುವುದು ಆ ಬಿಳಿಯ ಬಣ್ಣದ ಹಕ್ಕಿಗಳು ಆ ನೀಲವರ್ಣದ ಸಮುದ್ರದ ತೆರೆಗಳ ಮೇಲೆ ತೇಲುತ್ತಿರುವಾಗ. ಸುಪ್ರಭಾತದಲ್ಲಿ ಕಡಲು ಮೊರೆಯುತ್ತಿರುವಾಗ, ತೆರೆಗಳು ಒಂದನ್ನೊಂದು ನೂಕಿ ತೀರವನ್ನು ಸೋಂಕುತ್ತಿರುವಾಗ, ಏರಿ ಬರುವ ತೆರೆಗಳ ನೊರೆಯಲ್ಲಿ ಸೂರ್ಯಕಿರಣ ಗಳು ಸೇರಿ ಮುತ್ತಿನ ಗೊಂಚಲಿನ ಛಾಯೆಯನ್ನು ಬೀರುತ್ತಿರುವಾಗ ನೋಡ ಬೇಕು ಆ ಹಕ್ಕಿಗಳ ಆಟವನ್ನು! ತೆರೆಗಳು ಏರಿದಾಗ ಮೇಲಕ್ಕೇರಿ ತೆರೆ ಇಳಿದಾಗ ಇಳಿಯುವ ಅವುಗಳ ನೋಟವು ಮನವನ್ನು ಸೂರೆಗೊಳ್ಳುವುದು.

ಸಮುದ್ರ ತೀರದ ಬೆಳಗು ಒಂದು ಅಂದವನ್ನು ಕಣ್ಣಿಗೆ ಕಟ್ಟಿದರೆ ಸಂಜೆ ಇನ್ನೊಂದು ರಮಣೀಯ ದೃಶ್ಯವನ್ನು ದೃಷ್ಟಿಗೆ ತೆರೆಯುವುದು. ಸೂರ್ಯನು ಅದೇ ಪಶ್ಚಿಮಾಂಬುಧಿಯಲ್ಲಿ ಮುಳುಗುತ್ತಿರುವಾಗ ಕಾರ ವಾರದ ಕಡಲ ದಂಡೆಯ ಮಳಲ ಹರಹಿನ ಮೇಲೆ ನಿಂತು ಪಡುವಣಕ್ಕೆ ನೋಟವನ್ನು ಬೀರಬೇಕು-ಆಹಹ ಏನು ಅಂದವಾದ, ಎಷ್ಟು ವಿಧವಾದ ಬಣ್ಣಗಳ ಬಲೆ ನಮ್ಮ ಕಣ್ಣುಗಳನ್ನು ಸೆರೆ ಹಿಡಿಯುವುದು ! ಸೂರ್ಯನು ಕಡಲನ್ನು ಕಡೆದು ಆ ಬಣ್ಣಗಳನ್ನು ಹೊರಹೊರಡಿಸುವನೋ ಎಂಬಂತೆ ಭಾಸವಾಗುತ್ತದೆ. ಮೇಲೆ ನೀಲಾಕಾಶ ಕೆಳಗೆ ನೀಲಸಮುದ್ರಗಳು ಕೂಡುವೆಡೆಯಲ್ಲಿ ನಡೆಯುತ್ತದೆ ಈ ವರ್ಣವರ್ಣದ ಇಂದ್ರಜಾಲ.

ಬೆಳುದಿಂಗಳಿನಿರುಳಿನಲ್ಲಿ ಕಾರವಾರದ ನಾಲ್ಕೂ ನಿಟ್ಟಿನ ನೋಟವು ಸ್ವಪ್ನಸುಂದರವಾಗಿರುವುದು. ಆ ಅಲೆಗಳು, ಆ ಸಮುದ್ರ, ಆ ಮಳಲು ಹರಹು, ಆ ಗಾಳಿಯ ಗಿಡಗಳು, ಆ ತೆಂಗಿನ ಮರಗಳು ಎಲ್ಲವೂ ಸುಧಾ ರಸದಲ್ಲಿ ಮಿಂದು ವಿಮಲ ಸೌಂದರ್ಯವನ್ನು ಹೊಂದಿ ನಿಲ್ಲುವವು. ಸಾಗರದ ತರಂಗಗಳ ಲೀಲೆ ಹೆಚ್ಚುವುದು. ಅವುಗಳ ಅಂಚಿನ ನೊರೆಯು ಮುತ್ತಿನ ಗೊಂಚಲವನ್ನು ನೆನಪಿಗೆ ತರುವುದು. ಆಗ ಸಾಗರವು ನಿಜವಾಗಿಯೂ ಆನಂದದ ಆಗರವಾಗುವುದು. ಕಾರವಾರದಲ್ಲಿ ಅಲ್ಲಲ್ಲಿ ಮೇಲೆಕ್ಕೆದ್ದ ತೆಂಗಿನ

ಗರಿಗಳ ಮೇಲೆ ಬೆಳುದಿಂಗಳು ಮಾರ್ಪೊಳೆದು ಒರೆಯಿಂದ ಹಿರಿದ ಕರವಾಲಗಳನ್ನು ನೆನಪಿಗೆ ತರುವುದು.

ಇಲ್ಲಿಯ ವರೆಗೆ ಪಶ್ಚಿಮದ ದೃಶ್ಯವನ್ನು ಬಣ್ಣಿಸಿಯಾಯಿತು. ಕಾರವಾರದ ಪೂರ್ವಕ್ಕೂ ಸೃಷ್ಟಿಸೌಂದರ್ಯವು ದೃಷ್ಟಿಯನ್ನು ಸೆಳೆಯುವದು. ಮಳಲದಂಡೆಯ ಮೇಲಿಂದಲೇ ಬೆಳಗಿನಲಿ ಮೂಡಣಕ್ಕೆ ದಿಟ್ಟಿಯನ್ನು ಹರಿಬಿಟ್ಟರೆ ಸಮೀಪದಲ್ಲಿ ಸಾಲಾಗಿ ಸಿಂತ ಗಾಳಿಯ ಗಿಡಗಳು, ಅವುಗಳಾಚೆ ಗಿಡಗಳೊಳಗಿಂದಲೇ ಅಸ್ಪಷ್ಟವಾಗಿ ಕಾಣುವ ಊರ ಮನೆಗಳು, ಊರಿನಾಚೆ ಹಸಿರು ಮೆರೆಯು ಮಲೆಗಳು, ದೂರದಲ್ಲಿ ಆ ಮಲೆಗಳಿಗೆ ಮುದ್ದಿಡುವ ಮುಗಿಲು. ಸೌಂದರ್ಯದ ಶಿಖರವೋ ಎಂಬಂತೆ ಸೂರ್ಯನು ಆ ಚೆಲುವಾದ ಮಲೆಯನ್ನೇರಿ ಬರುವನು. ಕಾರವಾರದ ಸೌಂದರ್ಯ ದೇವಿಯ ದೇವಾಲಯದ ಬಾವುಟಗಳೋ ಎಂಬಂತೆ ಮೇಲಕ್ಕೆ ನೆಗೆದ ತೆಂಗಿನ ಮರಗಳ ಎಲೆಗಳು ಗಾಳಿಗೆ ಅಲೆದಾಗ ಚಕಚಕನೆ ಹೊಳೆಯುವವು.

ಕಾರವಾರದ ಮಳಲ ದಂಡೆಗುಂಟ ಉತ್ತರಕ್ಕೆ ಒಂದು ಹರಿದಾರಿ ನಡೆದು ಹೋದರೆ ಕಾಳೀನದಿಯು ಸಮುದ್ರಕ್ಕೆ ಕೂಡಿದ ಇನ್ನೊಂದು ಸುಂದರ ದೃಶ್ಯವು ದೊರೆಯುತ್ತದೆ. ಅದರ ಆಚೆಗೆ ಸದಾಶಿವ ಗಡವೆಂಬ ಐತಿಹಾಸಿಕ ಗ್ರಾಮವುಂಟು. ಹರಿಗೋಲಿನಲ್ಲಿ ಕುಳಿತು ಕಪ್ಪು ನದಿಯನ್ನು ದಾಟಿ ಸದಾಶಿವಗಡಕ್ಕೆ ಹೋಗಿ ಅದರ ಕೋಟೆಯ ಮೇಲಿಂದ ಕಾಣುವ ಸಮುದ್ರದ ವಿಶಾಲವಾದ ವಿಸ್ತಾರವಾದ ನೋಟವು 'ಅಹಹಾ' ಎಂದು ಉದ್ಗಾರವನ್ನು ಹೊರಡಿಸುವದು. ಕಾಳೀ ನದಿಯಲ್ಲಿ ತೇಲಿ ತೇಲಿ ಸಾಗುವ "ಹೋಡಿ" ಅಥವಾ ಇಮಾರತಿಯ ಕಟ್ಟಿಗೆ ಮೊದಲಾದ ಸಾಮಾನು ಹೇರಿಕೊಂಡು ಹೋಗುವ ಬರುವ ನಾವೆಗಳು "ಕಾಳೀ ನದಿಯಲ್ಲಿ ತೇಲಿ ಹೋಗುವ ಬಾ" ಎಂದು ಕರೆಯುವಂತೆ ತೋರುತ್ತವೆ. ಕಾಳೀ ನದಿಯಲ್ಲಿ ತೇಲಿ ಹೋಗುವ ಸಂಧಿ ದೊರೆತರೆ ರಸಿಕರಾದವರಿಗೆ ಅದೂ ಒಂದು ಭಾಗ್ಯ. ಆ ಹೊಳೆಯಲ್ಲಿ ತೇಲಿ ಹೋಗುವ ನಾವೆಗಳು ಹೆಚ್ಚಾಗಿ ಇರುಳಿನಲ್ಲಿಯೇ ಪ್ರವಾಸ ಮಾಡುತ್ತವೆ. ಬೆಳುದಿಂಗಳ ಇರುಳಿನಲ್ಲಿ ಇಂತಹ ನಾವೆಯಲ್ಲಿ ಪ್ರವಾಸ ಮಾಡುವ ಸುದೈವ ಒದಗಿದರಂತೂ ರಸಿಕರ ಆನಂದಕ್ಕೆ ಮೇರೆಯುಂಟೇ ? ನದಿಯು

ಇಕ್ಕೆಲದಲ್ಲಿ ಉದ್ದಕ್ಕೆ ಬೆಳೆದ ತರುಲತೆಗಳ ಸೌಂದರ್ಯವನ್ನು ಬಣ್ಣಿಸಲಾಗದು. ಜ್ಯೋತ್ಸ್ನೆಯ ಆಚ್ಛಾದನೆಯಿಂದ ಮೊದಲೇ ರಮಣೀಯವಾದ ನೋಟವು ಇನ್ನಿಷ್ಟು ರಮಣೀಯವಾಗಿ ತೋರುವುದು. ಇಬ್ಬದಿಯ ಚೆಲುವು ನದಿಯ ಜಲದಲ್ಲಿ ಪಡಿಮೂಡಿದ್ದನ್ನು ಕಂಡಾಂಗ ಆಗುವ ಆನಂದಕ್ಕೆ ಮೇರೆಯುಂಟೇ ? ಪ್ರಕೃತಿ ರಮ್ಯತೆಯಿಂದೊಡಗೂಡಿದ ಕಾರವಾರವನ್ನು ಸಂದರ್ಶಿಸುವ ಸೌಭಾಗ್ಯವನ್ನು ಪಡೆದವರು ಒಮ್ಮೆಯಾದರೂ ಹೋಡಿಯಲ್ಲಿ ಕೋಡಿಭಾಗದಿಂದ ಕದ್ರಾದ ವರೆಗೆ ಎಂಟು ಹತ್ತು ಮೈಲಿನ ಜಲಪರ್ಯಟಣವನ್ನು ಮಾಡಿದರೆ ತಿಳಿದೀತು ಆಗುವ ಆನಂದ.

— — — —

# ಬನವಾಸಿಯ ಮಡಿಲಲ್ಲಿ

ರಾಮ, ಸೀತೆ, ಲಕ್ಷ್ಮಣ ವನವಾಸ ಮಾಡಿದರು. ಅದರಂತೆ ಪಾಂಡವರು ವನವಾಸವನ್ನು ಅನುಭೋಗಿಸಿದರು: ವನವಾಸದಿಂದ ರಾಮಚಂದ್ರನ ಕೀರ್ತಿಗೆ ಹೆಚ್ಚಿನ ಕಾಂತಿಯುಂಟಾಯಿತು. ವನವಾಸದಿಂದ ಪಾಂಡವರ ಯಶಸ್ಚಂದ್ರಿಕೆ ಹರಡಲು ಅನುವಾಯಿತು. ಅಂತೂ ವನವಾಸ ಒಳ್ಳೆಯದೆಂದೇ ತೋರುತ್ತದೆ. ಇದನ್ನರಿತೇ ಕನ್ನಡಿಗರು ತಮ್ಮದೊಂದು ಸೊಗಸಾದ ಊರಿಗೆ 'ಬನವಾಸಿ' ಎಂದು ಹೆಸರಿಟ್ಟಿರಬೇಕು. ಬನದ ಚೆಲುವಿನಲ್ಲಿ ಮನವನ್ನು ಮೀಯಿಸಬಲ್ಲವರಿಗೆ ಬನವಾಸವೇ ಲೇಸು.

'ಬನವಾಸಿ'ಯ ಹೆಸರೋ ಇನಿದಾಗಿದೆ; ಕನ್ನಡಿಗರ ಮನದಲ್ಲಿ ಅದ ಎಚ್ಚರಗೊಳಿಸುವ ನೆನಪು ಒಂದಲ್ಲ; ಎರಡಲ್ಲ. ಮೇಲಾಗಿ ಆ ನೆನಪುಗಳು ಅಂತಿಂತಹವಲ್ಲ; ತುಂಬಾ ಹೆಮ್ಮೆಯ ನೆನಪುಗಳು. ಕನ್ನಡ ನಾಡಿನ ಇತಿಹಾಸದಲ್ಲಿ ಪ್ರಥಮ ಹಾಸವನ್ನು ಸೂಸಿದ ಹೆಮ್ಮೆ ಬನವಾಸಿಗುಂಟು. ಅಚ್ಚಗನ್ನಡ ಅರಸು ಮನೆತನಗಳಲ್ಲಿ ಮೊತ್ತಮೊದಲನೆಯದು ಕದಂಬ ಮನೆತನ. ಕದಂಬ ಅರಸರ ರಾಜಧಾನಿ 'ಬನವಾಸಿ'ಯೆಂಬುದನ್ನು ನೆನಪಿನಲ್ಲಿಡಬೇಕು. ನೆನಪಿನಲ್ಲಿಡುವಂತಿದೆ ಕದಂಬ ವಂಶವನ್ನು ಅರಸು ಮನೆತನದ ಮೇಲ್ಮೆಗೆ ಎತ್ತಿದ 'ಮಯೂರವರ್ಮ'ನ ಚರಿತ್ರೆ. ಮಯೂರವರ್ಮ ಕನ್ನಡಿಗ. ಆತ ತನ್ನ ಎಳೆ ವಯದಲ್ಲಿ ವಿದ್ಯಾಭ್ಯಾಸಕ್ಕಾಗಿ ಪಲ್ಲವರ ರಾಜಧಾನಿಯಾದ 'ಕಾಂಚಿ'ಗೆ ಹೋಗಿದ್ದ; ಅಲ್ಲಿ ಅವನಿಗೆ ಒಂದು ಅಪಮಾನ ಉಂಟಾಯಿತು; ಕನ್ನಡಿಗರು ಅಪಮಾನವನ್ನು ಸಹಿಸರು. ಸರಿ, ಪಲ್ಲವರನ್ನು ಸೋಲಿಸಿ ತನಗಾದ ಅಪಮಾನದ ಸೇಡು ತೀರಿಸಲು ಮಯೂರವರ್ಮ ಪಣತೊಟ್ಟ; ತೊಟ್ಟ ಪಣವನ್ನು ಪೂರ್ಣ ಮಾಡಿಯೇ ಬಿಟ್ಟ. ಅದರ ಪರಿಣಾಮ ಅವನು ಕಟ್ಟಿದ ಕನ್ನಡ ಕದಂಬ ರಾಜ್ಯ. ಆ ರಾಜ್ಯದ ರಾಜಧಾನಿ ಬನವಾಸಿ, ಇದೇನು ಕಿರಿಯ ಗೌರವವೇ?

ಅಂದಿನ ಕನ್ನಡ ಕದಂಬ ರಾಜರ ರಾಜಧಾನಿಯೆಂದಿಷ್ಟೇ ಬನವಾಸಿಯ ಹೆಸರು ಪ್ರಸಿದ್ಧವೆಂದು ತಿಳಿಯಕೂಡದು. ರಾಜಕೀಯ ಕ್ಷೇತ್ರದಲ್ಲಿ ಹೇಗೋ ಹಾಗೆ ಕಾವ್ಯ ಕ್ಷೇತ್ರದಲ್ಲಿಯೂ ಅದಕ್ಕೆ ಒಂದು ವಿಶಿಷ್ಟವಾದ ಮಾನವುಂಟು. ಪಂಪನು ಕನ್ನಡದ ಆದಿ ಕವಿಯೆಂದು ಮನ್ನಣೆ ಪಡೆದಿದ್ದಾನಷ್ಟೆ? ಅಂತಹ ಪೆಂಪು ಪಡೆದ ಪಂಪ ತನ್ನ ಕೃತಿರತ್ನದಾದ ಪಂಪ ಭಾರತದಲ್ಲಿ 'ಬನವಾಸಿ'ಯನು ಮನದೊಲವಿನಿಂದ ನೆನೆದು ರಚಿಸಿದ ಪದ್ಯಗಳನ್ನು ಕನ್ನಡ ಸಾಹಿತ್ಯಾಭ್ಯಾಸಿಗಳೆಲ್ಲರು ಬಲ್ಲರು. ಅವುಗಳಲ್ಲಿ ಒಂದು ಪದ್ಯವನ್ನು ಇಲ್ಲಿ ಉದ್ಧರಿಸಲಾಗಿದೆ:

ತೆಂಕಣ ಗಾಳಿ ಸೋಂಕಿದೊಡ ಮೊಳ್ನುಡಿಗೇಳ್ದೊಡ ಮಿಂಪನಾಳ್ದಗೇ
ಯಂಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕಂದಲಂ
ಪಂಗೆಡೆಗೊಂಡಂ ಮಧುಮಹೋತ್ಸವ ಮಾದೊಡಮೇನೆನೆಂಬನಾ
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ

ರಸಿಕಶ್ರೇಷ್ಠನಾದ ಪಂಪನ ಮನವನ್ನು ಇಷ್ಟೊಂದು ಸೂರೆಗೊಂಡಿರಬೇಕಾದರೆ ಬನವಾಸಿ ಎಷ್ಟೊಂದು ರಮ್ಯಸ್ಥಳವಾಗಿರಬೇಕು! ಪಂಪನ ಮನವನ್ನು ರೂಪಗೊಳಿಸುವಲ್ಲಿ ಬನವಾಸಿ ಮಹತ್ವದ ಪಾತ್ರವನ್ನು ವಹಿಸಿರಲೂ ಸಾಕು. ಬನವಾಸಿಯ ತೆಂಕಣ ಗಾಳಿ, ಒಳ್ನುಡಿ, ಇಂಪನಾಳ್ದ ಗೇಯ, ಬಿರಿದ ಮಲ್ಲಿಗೆ, ಮಧುಮಹೋತ್ಸವ—ಇವೆಲ್ಲ ಕವಿಯ ಅಂತಃಸತ್ವವನ್ನು ಅರಳಿಸಿದ್ದರೆ ಆಶ್ಚರ್ಯವಿಲ್ಲ. ಬನವಾಸಿಯ ಬಗೆಗೆ ಪಂಪ ಬರೆದ ಪದ್ಯಗಳಲ್ಲಿ ಅವನ ಕೃತಜ್ಞತಾ ಭಾವ ತುಂಬಾ ಒಡಮೂಡಿದೆ.

ಕದಂಬ ರಾಜಧಾನಿಯೆಂದು, ಕನ್ನಡದ ಆದಿ ಕವಿ ಪಂಪನ ಮನದ ತೂಗು ತೊಟ್ಟಿಲೆಂದು ಬನವಾಸಿಯ ಹೆಸರಿನಲ್ಲಿ ಸಾಕಷ್ಟು ಸೌರಭ ಸಂಗ್ರಹವಾಗಿದೆ; ಜೊತೆಗೆ ಶ್ರೇಷ್ಠ ಅನುಭಾವಿಯೊಬ್ಬನ ಸಂಪರ್ಕದ ಸೌರಭವನ್ನು ಪಡೆದ ಬನವಾಸಿ ಧನ್ಯವಾಗಿದೆ. ಅಲ್ಲಮ ಪ್ರಭು ಮದ್ದಳೆ ನುಡಿಸುತ್ತಿದ್ದುದು ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿ ಎಂಬುದನ್ನು ನೆನಪಿಗೆ ತಂದುಕೊಳ್ಳಬೇಕು. ಪಂಪನಲ್ಲಿ ಕಾವ್ಯದ ಬೀಜವನ್ನು ಬಿತ್ತಿದ ಬನವಾಸಿ ಪ್ರಭು

ವಿನಲ್ಲಿ ಅನುಭಾವದ ಅಂಕುರವನ್ನು ಮೂಡಿಸಿತು. ಕವಿ, ಅನುಭಾವಿ ಇಬ್ಬರೂ ಒಂದೇ ವರ್ಗಕ್ಕೆ ಸೇರಿದವರು. ಕವಿಯಾಗದವನು ಅನುಭಾವಿಯಾಗಲಾರ. ಉನ್ನತವಾದ ಕಾವ್ಯಕ್ಕೂ ಅನುಬಾವ ಸಾಹಿತ್ಯಕ್ಕೂ ಅಷ್ಟು ನಿಕಟವಾದ ಸಂಬಂಧ. ಅದೇನೇ ಇರಲಿ ಕದಂಬರ ಕಾಲದಲ್ಲಿ ಕಲಿತನದ ಸಂಪರ್ಕ ವನ್ನು, ರಾಷ್ಟ್ರಕೂಟರ ಕಾಲದಲ್ಲಿ ಕಾವ್ಯದ ಸಂಪರ್ಕವನ್ನು, ಹೊಯ್ಸಳರ ಹಾಗು ಕಲಚುರ್ಯರ ಕಾಲದಲ್ಲಿ ಅನುಭಾವದ ಸಂಪರ್ಕವನ್ನು ಸಂಪಾದಿ ಸಿದ ವಿಶಿಷ್ಟವಾದ ಪುಣ್ಯ ಬನವಾಸಿಯದು.

ಬನವಾಸಿಯ ಪರಿಸರವೇ ಹಾಗಿದೆ. ಕವಿಗಳ ಹಾಗು ಅನುಭಾವಿಗಳ ಹೃದಯವಿಕಸನಕ್ಕೆ ಅನುಕೂಲವಾದ ಆವರಣವದು. ವರದಾ ನದಿಯ ದಂಡೆಯಲ್ಲಿ ಒಂಗಿದ ಊರದು. 'ವರದಾ' ಬನವಾಸಿಗೆ ನಿಜವಾಗಿಯೂ ವರದೆಯಾಗಿದ್ದಾಳೆ; ಕಲಿಯ ಬೀಡಾಗಿ, ಕವಿಯ ಬೀಡಾಗಿ, ಅನುಭಾವಿಯ ಬೀಡಾಗಿ ಹೆಸರುಗಳಿಸಿದ ಬನವಾಸಿಗೆ ವರದೆ ವರವನ್ನಿತ್ತಿರಬೇಕೆಂದು ತಿಳಿ- ದರೆ ತಪ್ಪೇನು? ಮೇಲಾಗಿ ಊರು ಮಲೆನಾಡಿನ ಮಡಲಲ್ಲಿ ಎಡೆಗೊಂಡ ಊರು; ತೆಂಗು, ಅಡಕೆ ಮರಗಳಿಂದ ಅಂದವಡೆದ ಊರು. ತೆಂಗಿನ ಮರ ಗಳ ಸೌಂದರ್ಯ ಅವುಗಳದೇ. ಬೆಳುದಿಂಗಳಲ್ಲಿ ನೋಡಬೇಕು ತೆಂಗಿನ ಮರಗಳ ಚೆಲುವನ್ನು; ಮನೆ-ಮನೆಯ ಬಾವುಟದಂತೆ ರಾಜಿಸುತ್ತವೆ. ಆ ಚೆಂದವಾದ ಎತ್ತರವಾದ ಗಿಡಗಳು. ವರದಾ ನದಿಯು ವರದಿಂದ ಪಡೆದ ಫಲಗಳೋ ಎಂಬಂತೆ ಅವು ಟೆಂಗಿನ ಕಾಯಿಗಳನ್ನು ಗೊಂಚ-ಗೊಂಚಲಾಗಿ ತಳೆದು ನಿಂತಿರುತ್ತವೆ.

ಊರ ಸುತ್ತಲೂ ಮಲ್ಲಿಗೆ ಮೊದಲಾದ ಹೂಬಳ್ಳಿಗಳು ಹರಡಿರುವು ದನ್ನು ಕಾಣಬಹುದು. ಅದುದರಿಂದಲೇ ಪಂಪಕವಿ ಬನವಾಸಿಯನ್ನು ನಂದನ ವನವೆಂದು ವರ್ಣಿಸಿ ಅಲ್ಲಿ ಮನುಷ್ಯನಾಗಿ ಹುಟ್ಟುವುದು ಸಾಧ್ಯವಾಗದಿದ್ದರೆ ಕೊನೆಗೆ "ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನ ದೋಳ್ ಬನವಾಸಿ ದೇಶದೋಳ್" ಎಂದು ಉದ್ಗಾರತೆಗೆದಿದ್ದಾನೆ. ಬನವಾಸಿಯ ಆ ತೆಂಗು, ಆ ಅಡಕೆ, ಆ ಸಂಪಗೆ, ಆ ಮಲ್ಲಿಗೆ—ಮಾವಂತೂ ಸರಿಯೇ ಸರಿ—ಪಂಪ ಅಭಿಮಾನದಿಂದ ಮತ್ತು ಪ್ರೇಮದಿಂದ ಸ್ಮರಿಸಿದ

ನಂದನದ ವನವನ್ನು ಇಂದಿಗೂ ನೆನಪಿಗೆ ತರುವಂತಿವೆ. ಬನವಾಸಿ ವರದೆಯ ತಡಿಯಲ್ಲಿ ಒರಗಿದೆ ಎಂದು ಹೇಳಿಯಾಯಿತಷ್ಟೆ! ಹಾಗೆಯೇ ಅದನ್ನು ಕಂಡ ಕಣ್ಣಿನ ಆಚೆಯ ಮನವು ನಂದನದ ಮಡಿಲಲ್ಲಿ ಒರಗದಿರದು.

ಕನ್ನಡ ರಾಜ್ಯದ ಗಣ್ಯ ಅರಸರಾದ ಕದಂಬರ ರಾಜಧಾನಿಯಾಗುವ ಭಾಗ್ಯ ಬನವಾಸಿಗೆ ಅಂದು ಬಂತು; ಬಂದು ಹೋಯಿತು. ಇಂದು ಅದೊಂದು ಸಾಮಾನ್ಯವಾದ ಸ್ಥಳ. ಒಂದು ಸಾಧಾರಣ ಪ್ರತಿಯ ಗ್ರಾಮ. ಐತಿಹಾಸಿಕ ದೃಷ್ಟಿಯನ್ನಿಟ್ಟುಕೊಂಡು ನೋಡಬಯಸುವವರು ಬನವಾಸಿಯನ್ನು, ಹಿಂದಣ ಪ್ರಸಿದ್ಧಿಯ ಪ್ರಕಾಶದಲ್ಲಿಯೇ ಕಾಣಬೇಕು. ಬನವಾಸಿಯ ಹಿಂದಣ ಚರಿತ್ರೆಯ ಕುರುವಾಗಿ ಇಂದು ಮಧುಕೇಶ್ವರ ದೇವಾಲಯ ಉಳಿದಿದೆ. ಪ್ರಭುದೇವರ ಯುಗಕ್ಕೆ ನಮ್ಮ ಬಗೆಯನ್ನು ಅದು ಕೊಂಡೊಯ್ಯುತ್ತದೆ. ಮಧುಕೇಶ್ವರ ದೇವಾಲಯದಲ್ಲಿರುವ ಕಲ್ಲಿನ ಮಂಚವು ನಮ್ಮನ್ನು ಆ ಯುಗಕ್ಕೆ ತೇಲಿಸಿಕೊಂಡು ಹೋಗುತ್ತದೆ. ಆ ಕಲ್ಲಿನ ಮಂಚಕ್ಕೆ ಅದರದೇ ಆದ ಒಂದು ವೈಶಿಷ್ಟವುಂಟು. ಅಷ್ಟು ಅಂದವಾಗಿದೆ ಅದರ ಕೆತ್ತನೆಯ ಕೆಲಸ.

ಅಂತೂ ಹಿಂದಣ ಘನತೆಯ ನೆನಪೆಲ್ಲ ಬನವಾಸಿಯಲ್ಲಿ ಅವಿತುಕೊಂಡಿದೆ. ಚರಿತ್ರೆ ತನ್ನನ್ನು ಪುನಃ ಮನಃ ಪ್ರಕಟಗೊಳಿಸುತ್ತದೆ ಎಂದು ಹೇಳುತ್ತಾರೆ. ಘನವಾದ ಚರಿತ್ರೆ ಕಣ್ಮುಂದೆ ಪುನಃ ಪ್ರಕಟವಾಗುವ ಕಾಲ ಸನ್ನಿಹಿತವಾಗಿದೆ. ಕನ್ನಡ ನಾಡನ್ನು ನಿಚ್ಚಳವಾಗಿ ರೂಪಿಸಿದ ಅರಸುಮನೆತನಗಳಲ್ಲಿ ಮೊದಲಿನವರಾದ ಕದಂಬರ ರಾಜಧಾನಿ ಬನವಾಸಿ. ಹೊಸ ಕನ್ನಡ ನಾಡು ಈ ಸಂದರ್ಭದಲ್ಲಿ ಬನವಾಸಿಯ ಮಲ್ಲಿಗೆ—ಸಂಪಿಗೆಗಳಲ್ಲಿ ತುಂಬಿಕೊಂಡ ನೆನಪಿನ ಕಂಪು ಹೊಸ ಕನ್ನಡ ನಾಡಿನಲ್ಲೆಲ್ಲ ಹರಡಿ ಆ ನಾಡಿನ ಹಿಂದಣ ಘನತೆಯನ್ನು ಪುನಃ ಪ್ರಕಟಿಸಲಾರದೇ?

————

# ವನಮಹೋತ್ಸವ

ವರುಷ ಉರುಳುತ್ತದೆ; ಆದರೆ ಬರಿ ಉರುಳುವುದಿಲ್ಲ. ರಂಗು ರಂಗಾಗಿ ಉರುಳುತ್ತದೆ. ನವನವೋನ್ಮೇಷಶಾಲಿನಿಯಾಗಿ ಉರುಳುತ್ತದೆ. ವರುಷದ ಗತಿಯಲ್ಲಿ ಋತು ಋತುಗಳು ತಳೆಯುವ ನೂತನ ಸೌಂದರ್ಯದಿಂದಲೇ ಪ್ರಕೃತಿ ನವನವೋನ್ಮೇಷಶಾಲಿನಿಯಾಗುತ್ತದೆ. ಪ್ರಕೃತಿಯ ಸೌಂದರ್ಯವು ತನ್ನ ಪ್ರಭೆಯೊಡನೆ ಮಾನವನ ಚಿತ್ತದಲ್ಲಿ ಪ್ರತಿಫಲಿಸುತ್ತದೆ. ಮಾನವನ ಚಿತ್ತವೇ ಆ ರೀತಿಯಲ್ಲಿ ರಚಿತವಾಗಿದೆ. ಹೀಗೆ ರಚಿತವಾದ ಚಿತ್ತದ ಮೇಲೆ ತನ್ನ ಪ್ರಭೆಯನ್ನು ಚೆಲ್ಲುವ ಗುಣ ಪ್ರಕೃತಿಯಲ್ಲಿದೆ.

ಪ್ರಕೃತಿ ಚೆಲ್ಲಿದ ಪ್ರಭೆಯನ್ನು ಪ್ರತಿಯಾಗಿ ಚೆಲ್ಲುವ ಶಕ್ತಿ ಚಿತ್ತದಲ್ಲಿದೆ. ಆ ಶಕ್ತಿಯೇ ಕಲಾವಿದರಲ್ಲಿ ವಿಶೇಷವಾಗಿರುವ ಪ್ರತಿಭೆ. 'ಪ್ರತಿಭೆ' ಎಂಬ ಪದ ಪ್ರಯೋಗದಲ್ಲಿ ಬಂದುದು ಈ ಕಾರಣದಿಂದಲೇ ಎಂದು ಕಾಣುತ್ತದೆ. ಅದೇನೆ ಇರಲಿ; ಪ್ರಕೃತಿಯನ್ನು ಕಂಡು ಕೌತುಕಪಡುವ ಋತುಗಳು ಒಂದರ ಹಿಂದೊಂದು ಚಲಿಸಿದಂತೆ ಪ್ರಕೃತಿ ತಳೆಯುವ ಹೊಸ ಹೊಸ ಚೆಲುವನ್ನು ಕಂಡು ಹರ್ಷಿಸುವ ಗುಣ ಸಾಮಾನ್ಯವಾಗಿ ಮಾನವನ ಚಿತ್ತದಲ್ಲಿ ಬೆಳೆದು ಬಂದಿದೆ. ನಮ್ಮ ನಮ್ಮ ಅನುಭವಗಳೇ ಈ ಮಾತಿಗೆ ಸಾಕ್ಷಿ.

ಪ್ರಕೃತಿಯ ನೂತನ ವಿನೂತನ ರಮಣೀಯತೆಗೆ ಮುಖ್ಯವಾಗಿ ಎರಡು ಕಾರಣಗಳು. ಮೊದಲನೆಯದಾಗಿ ಋತುಗಳ ಚಲನೆ. ಎರಡನೆಯದಾಗಿ ಆ ಚಲನೆಯಿಂದ ಪ್ರಕೃತಿಯಲ್ಲಿ ಉಂಟಾಗುವ ವಿವಿಧ ವರ್ಣ ವೈಖರಿ. ಪ್ರಕೃತಿಯ

ಈ ಸೌಂದರ್ಯದಿಂದಾಗಿಯೇ ಅದು ಮಾನವನ ಚಿತ್ತಕ್ಕೆ ಸ್ವಾರಸ್ಯವನ್ನು ಒದಗಿಸುತ್ತದೆ. ಚಳಿಗಾಲದಲ್ಲಿ ನಿಸರ್ಗವು ತಳೆಯುವ ರೂಪವೇ ಬೇರೆ. ವಸಂತಕಾಲದಲ್ಲಿ ಅದು ಬೀರುವ ಬೆಡಗೇ ಬೇರೆ. ಮಳೆಗಾಲದಲ್ಲಿ ಅದು ತೋರುವ ಲೀಲೆಯೇಬೇರೆ. ಅನಂತವಾದ ಆಕಾಶವು ನಿಸರ್ಗದ ಒಂದು ಮುಖವಾದರೆ ಪಲ್ಲವಿಸುವ ಪೃಥ್ವಿಯು ಅದರ ಇನ್ನೊಂದು ಮುಖ. ಚಿತ್ತವು ಕಣ್ಣೆಂಬ ಕಿಟಕಿಯಿಂದ ಅವುಗಳ ವಿವಿಧ ವೈಭವವನ್ನು ಕಂಡು ನಲಿಯು ವುದುಂಟು.

ಹೊಸ ಋತುವಿನೊಡನೆ ಹೊಸ ಶೋಭೆ ಹೆಜ್ಜೆಯಿಕ್ಕುತ್ತದೆ. ಹೊಸ ತನವನ್ನು ಸ್ವಾಗತಿಸುವ ಗುಣ ಮಾನವನ ಮನದಲ್ಲಿ ನೆಲೆಗೊಂಡಿದೆ. ಈ ಉತ್ಸಾಹದ ಸ್ವಾಗತವು ಒಂದೊಂದು ಜನಾಂಗದಲ್ಲಿ ಒಂದೊಂದು ತೆರನಾಗಿ ಸಾಮೂಹಿಕ ಸ್ವರೂಪವನ್ನು ಪಡೆದು ಸಂಪ್ರದಾಯವಾಗಿ ಪರಿಣಮಿಸುತ್ತದೆ. ಸಂಪ್ರದಾಯಕ್ಕೆ ತಿರುಗಿದ ಇಂತಹ ಒಂದು ಸಾಮೂಹಿಕ ಉತ್ಸಾಹವೇ ಉತ್ಸವ; ಆ ಉತ್ಸವದ ಪ್ರಮಾಣ ಬೆಳೆದಂತೆ ಅದು ಮಹೋತ್ಸವವಾಗಿ ಪರಿಣಮಿಸುತ್ತದೆ.

ಒಂದೊಂದು ಪ್ರದೇಶದಲ್ಲಿ ಒಂದೊಂದು ಋತು ಹೆಚ್ಚು ಪ್ರಿಯ ವಾಗಿರುತ್ತದೆ. ಆ ದೇಶದ ಭೌಗೋಲಿಕ ಪರಿಸರವೇ ಅದಕ್ಕೆ ಕಾರಣ. ಶೀತ ಕಟಿಬಂಧದಲ್ಲಿರುವ ಇಂಗ್ಲಂಡಿನಲ್ಲಿ ಬೇಸಗೆಯ ಪ್ರಾರಂಭದಲ್ಲಿ ಋತು ಮಹೋತ್ಸವ ನಡೆದರೆ ಅದು ಸ್ವಾಭಾವಿಕ. ನಮ್ಮ ದೇಶದಲ್ಲಿ ವಸಂತ ಸಮಯದಲ್ಲಿ ಉತ್ಸವ ನಡೆಯುವುದು ಅಷ್ಟೇ ಸ್ವಾಭಾವಿಕ. ನಮ್ಮ ದೇಶ ದಲ್ಲಿ ಪೂರ್ವಕಾಲದಲ್ಲಿಯೇ ವಸಂತಮಹೋತ್ಸವವು ರೂಢಿಯಲ್ಲಿದ್ದಿತೆಂಬು ದಕ್ಕೆ ನಮ್ಮ ಸಾಹಿತ್ಯದಲ್ಲಿ ಆಧಾರ ದೊರೆಯುತ್ತದೆ.

"ಮಧು ಮಹೋತ್ಸವ ಮಾದೊಡಮೇನ ನೆಂಬೆನಾರಂಕುಶ ಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ" ಎಂದು ನಮ್ಮ ಆದಿಕವಿ ಪಂಪನು ತನ್ನ ಭಾರತದಲ್ಲಿ ಹಿಗ್ಗಿ ಹಾಡಿರಬೇಕಾದರೆ ಅಂದಿನ ವಸಂತೋತ್ಸವ ಎಷ್ಟು ಉಲ್ಲಾಸದೊಡನೆ ನಡೆಯುತ್ತಿರಬೇಕು!

ಅದೇನೇ ಇರಲಿ, ಇತ್ತೀಚೆಗೆ ನಮ್ಮ ದೇಶದಲ್ಲಿ ವನಮಹೋತ್ಸವ ರೂಢಿಗೊಳ್ಳುತ್ತಿದೆ. ಅದಕ್ಕೆ ಕಾರಣಗಳೂ ಉಂಟಾದುವು. ವನಸಂಪತ್ತಿಗೆ ಕೊಡಲಿ ಬಿದ್ದು ಅದರ ಸೌಂದರ್ಯ ಕಡಿಮೆಯಾದುದಲ್ಲದೆ ಮಳೆಯೂ ಕಡಿಮೆಯಾಗಹತ್ತಿದುದು ಅವುಗಳಲ್ಲಿ ಮುಖ್ಯ ಕಾರಣ. ವೃಕ್ಷಗಳು ಮಳೆಯನ್ನು ಆಕರ್ಷಿಸುತ್ತವೆ. ಅವುಗಳ ಮೌನಧ್ಯಾನಕ್ಕೆ ಒಲಿದು ಮೇಘಗಳು ಮಳೆಗರೆಯುತ್ತವೆಯೋ ಏನೋ!

ಅದೇನೆ ಇರಲಿ, ವನಮಹೋತ್ಸವವು ರೂಢಿಗೊಳ್ಳುತ್ತಿರುವುದು ಸಂತೋಷದ ಸಂಗತಿಯೇ ಸರಿ; ಏಕೆಂದರೆ ಅದರಿಂದ ಜೀವನಕ್ಕೆ ಪ್ರಯೋಜನವುಂಟಲ್ಲದೆ ಅದು ಜೀವನಕ್ಕೆ ರಂಗನ್ನು ಬರೆದು ಹರ್ಷೋತ್ಕರ್ಷವನ್ನುಂಟುಮಾಡುತ್ತದೆ. ವನಮಹೋತ್ಸವವು ಪ್ರಕೃತಿ ಸೌಂದರ್ಯಕ್ಕೆ ಸಂಬಂಧಿಸಿದ ಉತ್ಸವ. ಋತು ಕೌತುಕವನ್ನು ಒಳಗೊಂಡ ಮಹೋತ್ಸವ. ಬರಿಯ ಬಯಲಿನ ಆರಾಧನೆ ಸಾಮಾನ್ಯರಿಗೆ ಸಾಧ್ಯವಿಲ್ಲ. ಬೆಳೆಯುವ ಬಾಲಕರ ದೃಷ್ಟಿಯಿಂದ ಬಯಲಿನಾರಾಧನೆಯಲ್ಲಿ ರಹಸ್ಯವೂ ಇಲ್ಲ. ಅದರಿ ಕಲ್ಲು-ಮಣ್ಣುಗಳಿಂದ ಮಾಡಿದ ಮೂರ್ತಿಗಳ ಪೂಜೆಯು ಅಜ್ಞಾನದ ಕುರುಹು. ಇವೆರಡು ಆತ್ಯಂತಿಕ ಪಕ್ಷಗಳನ್ನು ಬಿಟ್ಟರೆ ಸಜೀವ ಪ್ರಕೃತಿಯ ಸೌಂದರ್ಯವನ್ನು ಕಣ್ಣಿಗೆತ್ತಿನಿಲಿಸುವ ಋತುವನ್ನೇ ಆರಾಧಿಸುವುದು ಸುವರ್ಣ ಮಧ್ಯಮಾರ್ಗ. ವನಮಹೋತ್ಸವವು ಇಂಥದೊಂದು ಸುವರ್ಣ ಮಧ್ಯಮಾರ್ಗ. ಸಜೀವ ಲತಾವೃಕ್ಷಗಳಿಗೆ ಮೇಘಗಳು ನೀರನೂಡುವ ವರ್ಷಾಕಾಲದಲ್ಲಿ ನಡೆಯುವ, ನಡೆಯಬೇಕಾದ, ಮಹೋತ್ಸವವದು; ಅದರಲ್ಲಿ ಇಂದಿನ ಆನಂದವಿದೆ; ಮುಂದಿನ ವೈಭವವಿದೆ; ಇಂದಿನ ಪರಿಶ್ರಮದಲ್ಲಿ ಮುಂದಿನ ಫಲ ಹುದುಗಿದೆ.

ವನಮಹೋತ್ಸವವು ವರ್ಷಾಕಾಲದಲ್ಲಿ ಪ್ರಕೃತಿಯು ಲತಾವೃಕ್ಷಗಳ ರೂಪದಲ್ಲಿ ತೋರುವ ಚೈತನ್ಯಕ್ಕೆ ಸಂಬಂಧಿಸಿದುದು. ಗಿಡಬಳ್ಳಿಗಳು ನಮ್ಮನ್ನು ಸದಾ ಆವರಿಸುವಂಥವುಗಳು. ಅವುಗಳ ಬಗೆಗೆ ನಮ್ಮಲ್ಲಿ ಒಂದು ಅನುರಾಗ ತಾನೇ ತಾನಾಗಿ ಬೆಳೆದು ಬರುವುದುಂಟು. ಚಳಿಗಾಲ

ವನ್ನುಳಿದು ವರ್ಷದ ಉದ್ದಕ್ಕೂ ಹಸಿರನ್ನೇ ತೂಗುವ ಅವುಗಳ ಟೊಂಗೆಗಳು, ಋತುಮಾನಕ್ಕೆ ತಕ್ಕಂತೆ ಅವು ತಳೆಯುವ ಬಣ್ಣ-ಬಣ್ಣದ ಹೂಗಳು, ಬೇಸಿಗೆಯಲ್ಲಿ ಅವು ನೇಯುವ ಬಣ್ಣ ಬಣ್ಣದ ಬಲೆಗಳು, ಬೆಳುದಿಂಗಳಲ್ಲಿ ಅವು ರಚಿಸುವ ಸ್ವಪ್ನಸುಂದರ ಛಾಯೆಗಳು—ಇವೆಲ್ಲ ನಮಗೆ ಒಂದು ಆನಂದವನ್ನುಂಟುಮಾಡುತ್ತವೆ. ಈ ದೃಷ್ಟಿಯಿಂದ ವನಮಹೋತ್ಸವವು ಒಂದು ನೈಸರ್ಗಿಕವಾದ ಮಹೋತ್ಸವ. ಈ ಮಹೋತ್ಸವವು ಆನಂದ ವನ್ನೂ ಪ್ರಯೋಜನವನ್ನೂ ಕೂಡಿಯೇ ಉಂಟುಮಾಡುವಂತೆ ನೋಡಿ ಕೊಳ್ಳುವುದು ನಮ್ಮನ್ನೇ ಕೂಡಿದೆ.

---

# ಕೂಡಲ ಸಂಗಮದಲ್ಲಿ 'ಕಲ್ಯಾಣ'ದ ದರ್ಶನ

ಜೀವನದಲ್ಲಿ ವ್ಯಕ್ತಿಗಳು ಹೇಗೊ ಹಾಗೆ ಸನ್ನಿವೇಶಗಳೂ, ಸ್ಥಳಗಳೂ ಒಂದು ವಿಶೇಷ ಪರಿಣಾಮವನ್ನು ಉಂಟುಮಾಡುತ್ತವೆ. ಒಂದೊಂದು ಸನ್ನಿವೇಶಕ್ಕೆ ಒಬ್ಬೊಬ್ಬ ವ್ಯಕ್ತಿ ತನ್ನ ಚಿತ್ತವನ್ನು ತೆರೆಯುವುದುಂಟು. ಬಾಹ್ಯ ಸನ್ನಿವೇಶದ ಪ್ರಭೆಯನ್ನು ಒಳಗೊಳ್ಳುವುದೂ, ತಾನು ಪಡೆದ ಪ್ರಭೆ ತನ್ನ ಜೀವನದಲ್ಲಿ ಪ್ರವಹಿಸುವಂತೆ ಮಾಡುವುದೂ ಆ ವ್ಯಕ್ತಿಯ ಅಂತಃಶಕ್ತಿಯನ್ನು ಅವಲಂಬಿಸಿರುತ್ತದೆ.

ಪ್ರಪಂಚದಲ್ಲಿ ಆಗಿ ಹೋದ ಕಾವ್ಯರ್ಷಿಗಳೂ ದೃಷ್ಟಾರರೂ ಸುತ್ತಲಿನ ಪ್ರಕೃತಿಯ ಯೋಗದಿಂದ ಭವ್ಯದರ್ಶನವನ್ನು ಪಡೆದುದುಂಟು. ದಿವ್ಯದರ್ಶನವುಂಟಾಗುವುದು ಬಹುಶಃ ಹೀಗೆ ಎಂದು ಕಾಣುತ್ತದೆ. ಪ್ರಕೃತಿಯ ವೈಶಾಲ್ಯ ಔನ್ನತ್ಯಗಳು ಅವರ ಚಿತ್ತವನ್ನು ಅರಳಿಸುತ್ತವೆ. ಆ ವೈಶಾಲ್ಯಕ್ಕೆ ಆ ಔನ್ನತ್ಯಕ್ಕೆ ಆ ಭವ್ಯ ಸೌಂದರ್ಯಕ್ಕೆ ಅವರ ಆಂತರ್ಯವು ಓಗೊಡುತ್ತದೆ. ಆದರೆ ಬರಿ ಕೌತುಕದಲ್ಲಿ ಚಿತ್ತ ತನ್ನನ್ನು ತಾನೆ ಮರೆಯುವುದಿಲ್ಲ. ಆ ಔನ್ನತ್ಯದ ಸಂದರ್ಶನದ ಪರಿಣಾಮವಾಗಿ ತನ್ನ ಇಂದಿನ ಬಗೆಗೆ ತಾನೆ ಎಚ್ಚರಗೊಳ್ಳುತ್ತದೆ. ಆಗ ಬಾಹ್ಯ ಹಾಗು ಆಂತರ್ಯಗಳ ನಡುವಣ ಪರದೆಗಳೆಲ್ಲ ಎಂತೋ ಮಾಯವಾಗಿ ಒಳಗೂ ಹೊರಗೂ ಒಂದಾಗುವವೆಂದು ಕಾಣುತ್ತದೆ. ಬಾಹ್ಯ ಸನ್ನಿವೇಶದಲ್ಲಿ ಅಂತರಂಗದ ಬೆಳಕೇ ಬೆಳಗಿ ನಿಲ್ಲುತ್ತದೆ. ಪ್ರಕೃತಿ ಬರಿ ಜಡವಾಗಿ ಉಳಿಯದೆ ಚೈತನ್ಯಮಯವಾಗುತ್ತದೆ. ಪ್ರಕೃತಿಯ ಪರಾಗ ಅಂತರಂಗವೆಂಬ ಭೃಂಗದ ಕಲೆಯಿಂದ ಅನುಭಾವದ ಮಧುವಾಗಿ ಪರಿಣಮಿಸುತ್ತಿರಬಹುದೇ ? ಕಾವ್ಯರ್ಷಿಗಳಿಗೆ ಅಥವಾ ದೃಷ್ಟಾರರಿಗೆ ಅವ್ಯಕ್ತವು ಈ ಬಗೆಯ ಸಂದರ್ಶನಾನಂದವನ್ನು ನೀಡಬಹುದೇನೋ !

ದೃಷ್ಟ್ಯಾರರಾದ ಬಸವಣ್ಣನವರ ಜೀವನದಲ್ಲಿ, ಅವರ ಜೀವವಾಣಿ ಯಾದ ವಚನಗಳಲ್ಲಿ, ಈ ಮಾತಿಗೆ ನಿದರ್ಶನ ದೊರೆಯುತ್ತದೆ. ಚೇತೋ ಹಾರಿಯಾದ ಕೂಡಲ ಸಂಗಮದಲ್ಲಿ, ಕೃಷ್ಣಾ ಮತ್ತು ಮಲಪ್ರಭಾ ನದಿಗಳು ತಮ್ಮ ಒಡಲ ಜಲವನ್ನು ಬೆರೆಸಿದ ಆ ಸುವಿಶಾಲ ಸುಂದರ ಸ್ಥಳದಲ್ಲಿ ಬಸವಣ್ಣನವರ ಚಿತ್ತದಲ್ಲಿ ನೂತನ ಸ್ಫೂರ್ತಿಯೊಂದರ ಅವತಾರವಾಗಿರ ಬೇಕು. ಬರಿ ಜಲ ತೀರ್ಥವಲ್ಲ; ಬರಿ ನೆಲ ಕ್ಷೇತ್ರವಲ್ಲ. ಜಲ ತೀರ್ಥ ವಾಯಿತು ಬಸವಣ್ಣನವರ ಮನವು ಯಾವುದೋ ಘನದ ಸುಳುಹನ್ನು ಅನು ಭವಿಸಿದಾಗ. ಸ್ಥಳ ಕ್ಷೇತ್ರವಾಯಿತು ಅವರ ಚಿತ್ತವನ್ನು ಮೇಲಕ್ಕೆತ್ತು ವಂತಹ ಯಾವುದೋ ಒಂದು ಪರಿಣಾಮವನ್ನು ಅದು ಸೂಸಿದಾಗ. ಊಡುವ ಆವಿಂಗೆ ಉಣ್ಣುವ ಕರುವ ಬಿಟ್ಟಂತೆ ಆಗಿರಬೇಕು.

ಸಂತತವಾಗಿ ಸುಸೀಲ ಜಲವನ್ನು-ತೋಡುವ ಆ ಎರಡು ಹೊಳೆಗಳು ಅನಂತದಿಂದ ಸಾಗಿ ಬಂದು ಅಪ್ಪಿನಿಂದರೂ ಅನಂತಕ್ಕೆ ಪ್ರತಿಚಣವೂ ಧಾವಿ ಸುವ ದೃಶ್ಯ; ಇಕ್ಕೆಲದಲ್ಲಿಯೂ ಅವು ಹರಡಿದ ನುಣ್ಣನೆಯ ತಣ್ಣನೆಯ ಮಳಲ ಹರಹು; ಆ ಮಳಲ ಹರಹಿನ ಆಚೆ ಈಚೆ ಕಣ್ಣೋಟ ಹರಿಯುವ ವರೆಗೆ ಸಮನಾಗಿ ಸುವಿಶಾಲವಾಗಿ, ಫಲಪ್ರದವಾಗಿ ಹರಡುವ ಭೂಮಿ ತಾಯಿಯ ಆ ಮಡಿಲು—ಭಾವಾವೇಶವನ್ನು ಹೊಂದಬಲ್ಲ ನೂತನ ಜೀವನಕ್ಕೆ, ದೃಷ್ಟಿಯಿಟ್ಟು ತೆರೆಗೊಳ್ಳುವ ಜೀವಕ್ಕೆ ಎಂಥ ಯೋಗ ! ಆ ನಿರ್ಮಲ ಸಲೀಲ ಸಲಿಲ ಪ್ರವಾಹ; ಆ ಸಲಿಲದೊಡನೆ ತೆರೆಗೊಳುವ ಕಾರುಣ್ಯ, ಸುತ್ತಲಿನ ಪಾರ್ಶ್ವಭೂಮಿಯೊಡನೆ ಆ ಸಲಿಲ ಪಡೆದ ಸಾಮ ರಸ್ಯದ ದೃಶ್ಯ ನಿರ್ಮಲ ಪ್ರಭಾವಕ್ಕೆ ಪುಳಕಿಸುವ ಆ ಎಳೆ ಜೀವನಕ್ಕೆ ಯಾವುದೋ ರಹಸ್ಯದ ಸೂಚನೆಯನ್ನು ಒದಗಿಸರಬಹುದೇ ?

ಬಸವಣ್ಣವರ ಭಾವ ಹೀಗೆ ತಾನಾಗಿ ಅರಳಿದಾಗ ಅವರಿಗೆ ಕಂಡ ಕೂಡಲ ಸಂಗಮ ಕೇವಲ ಎರಡು ನದಿಗಳ ಸಂಗಮವಲ್ಲ. ಎಂದೆಂದೂ ಸ್ಫುರಿಸುವ ಒಲವಿನ ಎರಡು ಹೊನಲುಗಳು ಜಲದ ರೂಪದಲ್ಲಿ ಬೆರೆದು ಕಲ್ಯಾಣ ಪ್ರದವಾದ ಸೌಂದರ್ಯವನ್ನು ತೆರೆದು ತೋರಿದ ನೋಟ. ಅದರ ಪ್ರೇರಣೆಯಿಂದ ಅರಳಿದ ಭಾವ ಭಕ್ತಿಯಾಗಿ ಪರಿಣಮಿಸಿದರೆ ಅದು

ಸಹಜವೇ ಸರಿ. ಇಂತಾಗಿರಬೇಕು ಬಸವಣ್ಣನವರಿಗೆ ಕೂಡಲ ಸಂಗಮ ದಲ್ಲಿ ಸಂಗಮನಾಥನ ದರ್ಶನ. ಕೃಷ್ಣಾಮಲಾಪಹಾರಿಗಳ ಕೂಡಲ ಸಂಗಮ ಆ ದರ್ಶನಕ್ಕೆ ನಿಮಿತ್ತ ಮಾತ್ರ. ಏಕೆಂದರೆ ಅದೇ ಬಗೆಯ ಭವ್ಯ ಸೌಂದರ್ಯದ ಸಂಪರ್ಕ ಬೇರೆಡೆಗೆ ಒದಗಿದ್ದರೂ ಬಸವಣ್ಣನವರ ಅಂತ ರ್ಮವು ಅದೇ ಬಗೆಯಲ್ಲಿ ಸ್ಪಂದಿಸಬಹುದಾಗಿತ್ತು. ಬಸವಣ್ಣನವರು ಒಂದು ವಿಶಿಷ್ಟವೂ ವಿನೂತನವೂ ಆದ ಚಿತ್ತಲಹರಿಯಲ್ಲಿ ಇದ್ದಾಗ ಕೂಡಲ ಸಂಗಮದ ಸಂಪರ್ಕ ದೊರೆತುದೇ ದಾರಿ ಮಾಡಿತು ಕಲ್ಯಾಣಕ್ಕೆ.

ಮಾನವ ಜೀವನದಲ್ಲಿ ಜ್ಞಾಪಕವು ಉಂಟುಮಾಡುವ, ಅದರಲ್ಲಿಯೂ ಚಿತ್ತವನ್ನು ಸೂರೆಗೊಂಡ ಒಂದು ಸನ್ನಿವೇಶದ ಜ್ಞಾಪಕವು ಉಂಟುಮಾಡುವ ಪರಿಣಾಮವು ಅಷ್ಟಿಷ್ಟಲ್ಲ. ಬಸವಣ್ಣನವರಿಗೆ ಸಂಗಮಮಸ್ಥಳದಲ್ಲಿ ದೊರೆತ ಯಾವುದೋ ಒಂದು ಬೆಳಕು ಸ್ಮರಣೆಯಿಂದಾಗಿ ಸ್ಥಿರಗೊಂಡಿತು. ಧ್ಯಾನದಿಂದ ದೃಢಪಟ್ಟಿತು. ಪೂಜೆಯಿಂದ ಓಜೆಗೊಂಡಿತು. ಯಾವುದೋ ಒಂದು ಲಹರಿಯ ಸಂದರ್ಭದಲ್ಲಿ ಒಂದೆಡೆಯಲ್ಲಿ ಆಕಸ್ಮಿಕವಾಗಿ ತನ್ನ ನಿಲವನ್ನು ತೋರಿದ ಕೂಡಲ ಸಂಗಮನು

"ಎತ್ತೆತ್ತ ನೋಡಿದರೆ ನೀನೇ, ದೇವಾ
ಸಕಲ ವಿಸ್ತಾರದ ರೂಹು ನೀನೇ, ದೇವಾ
ವಿಶ್ವತಃ ಚಕ್ಷು ನೀನೇ, ದೇವಾ
ವಿಶ್ವತೋ ಮುಖ ನೀನೇ, ದೇವಾ
ವಿಶ್ವತೋ ಪಾದ ನೀನೇ, ದೇವಾ
ಕೂಡಲ ಸಂಗಮದೇವಾ"

ಎಂದು ಉದ್ಗಾರ ತೆಗೆದ ಬಸವಣ್ಣನವರ ಅನುಭಾವದ ವಿಸ್ತಾರಕ್ಕೆ ಹರಡಿ ನಿಂತನು ಅವರ ಭಾವದ ಬಯಲಿನಲಿ. ಒಂದೆಡೆಯಲ್ಲಿ ಆದ ತಿಳಿವು ಎಲ್ಲೆಲ್ಲಿಯ ಮಾರ್ಪೊಳೆಯಿತು.

ಕೂಡಲ ಸಂಗಮವು ಈ ರೀತಿಯಾಗಿ ಬಸವಣ್ಣನವರ ಸ್ಫೂರ್ತಿಯ ಸೆಲೆಯಾಯಿತು. ಅವರ ಆಧ್ಯಾತ್ಮದ ಗರಡಿಯೂ ಆಯಿತು. ಅಸಾಧಾರಣ

ನಾದ ವ್ಯಕ್ತಿಯಲ್ಲಿ ಶಕ್ತಿ ಸಂಗ್ರಹವಾಗುವುದಕ್ಕೆ ಕಾರಣವಾಯಿತು. ಬಸವಣ್ಣನವರ ಅಂತರಂಗದ ಸಂಪತ್ತು ಬೆಳೆಯುವಂತೆ ಪ್ರೇರಣೆ ನೀಡಿತು. ಕೂಡಲ ಸಂಗಮದಲ್ಲಿ ಬಸವಣ್ಣನವರ ನಿರ್ಮಲವಾದ ಭಕ್ತಿಗೆ ಕಳೆಯೇರಿದ ಪರಿಯನ್ನು ಹರಿಹರದೇವನು ಬಹು ನಿಚ್ಚಳವಾಗಿ—ಅವರ ಭಾವದೊಡನೆ ತನ್ನ ಭಾವವನ್ನು, ಅವರ ಪೂಜೆಯೋಜೆಯೊಡನೆ ತನ್ನ ಪೂಜೆಯ ಓಜೆಯನ್ನು ಬೆರಸಿ—ಮೂಡಿಸಿದ್ದಾನೆ ತನ್ನ ಬಸವರಾಜದೇವ ರಗಳೆಯಲ್ಲಿ.

ತರುವಾಯ ಕಲ್ಯಾಣದಲ್ಲಿ ಬಸವಣ್ಣನವರು ಗೈದ ಕಲ್ಯಾಣಲೀಲೆಗೆ ಹಿನ್ನೆಲೆಯಾಯಿತು ಕೂಡಲ ಸಂಗಮ. ಇಲ್ಲಿ ಸಂಗ್ರಹವಾದುದನ್ನು ಅಲ್ಲಿ ಅವರು ನೀಡಿದರು. ಇಲ್ಲಿ ತುಂಬಿದ ದಯ ಅಲ್ಲಿ ತುಳುಕಿತು. ಇಲ್ಲಿ ಕೂಡಿದ ಜ್ಞಾನ ಅಲ್ಲಿ ಕ್ರಿಯೆಗೈದಿತು. ಇಲ್ಲಿ ನೀರೆರೆದ ವೃಕ್ಷ ಅಲ್ಲಿ ಫಲಿಸಿತು. "ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿಗೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗಿದ್ದಿತಯ್ಯಾ ಶಿವನ ಪ್ರತಾಪ; ಆ ಬೆಳಗಿನಲ್ಲಿ ಒಪ್ಪುತಿರ್ದರಯ್ಯಾ ಅಸಂಖ್ಯಾತ ಪ್ರಮಥ ಗಣಂಗಳು..............." ಎಂದು ಪ್ರಭುದೇವರು ನುಡಿದಂತೆ ಬಸವಣ್ಣನವರು ಜ್ಯೋತಿಯಾಗಿ ರೂಪಗೊಂಡರು ಕೂಡಲ ಸಂಗಮದಲ್ಲಿ.

— — — —

# ನಿಟ್ಟು ಮೂರು

## ಕಲೆ

# ಕಲೆಯ ನೆಲೆ

ಮಾನವನು ತನ್ನ ವಿಕಾಸದ ಫಲವಾಗಿ ಪಡೆದ ಸಂಸ್ಕೃತಿಯು ಎದ್ದು ಕಾಣುವುದು ಅವನು ನಿರ್ಮಿಸಿದ ಹಾಗೂ ನಿರ್ಮಿಸುತ್ತಿರುವ ಲಲಿತ ಕಲೆಗಳಲ್ಲಿ. ವಿಕಾಸವಿಲ್ಲದೆ ಸಂಸ್ಕೃತಿಯಿಲ್ಲ; ಸಂಸ್ಕೃತಿಯಿಲ್ಲದೆ ಕಲೆಯಿಲ್ಲ.

ಪ್ರಾಣಿಗಳಲ್ಲಿ ಮಾನವನಿಗೆ ಮಾತ್ರ ಅಂತರಂಗದ ವಿಕಾಸವು ಸಾಧ್ಯ. ಆದುದರಿಂದಲೇ ಅವನಿಗೆ ಸಂಸ್ಕೃತಿಯೂ ಸಾಧ್ಯ; ಅವನು ನಿರ್ಮಿಸಿದ ಲಲಿತ ಕಲೆಗಳಲ್ಲಿ ಅವನ ಸಂಸ್ಕೃತಿಯ ಕೆಲವೊಂದು ಅಂಶಗಳು ವ್ಯಕ್ತವಾಗಿವೆ. ಕಲೆಗಳು ಮಾತ್ರ ಸಂಸ್ಕೃತಿಯ ದ್ಯೋತಕಗಳೆಂದು ತಿಳಿಯಲಾಗದು. ಏಕೆಂದರೆ ಸಂಸ್ಕೃತಿಯ ವಿಸ್ತಾರವು ಲಲಿತ ಕಲಾಕ್ಷೇತ್ರದ ವಿಸ್ತಾರಕ್ಕಿಂತ ಯಾವಾಗಲೂ ಅಧಿಕ. ಜೀವನವೇ ಒಂದು ಕಲೆ ಎಂದು ಗಣಿಸಿದರೆ ಮಾತ್ರ ಸಂಸ್ಕೃತಿಯ ಹಾಗು ಕಲೆಯ ವಿಸ್ತಾರಗಳು ಸಮ ಸಮನಾಗುತ್ತವೆ. ಚಿತ್ರವನ್ನು ರೂಪಿಸುವಂತೆ, ಗೀತವನ್ನು ದೀಪಿಸುವಂತೆ, ಶಿಲ್ಪವನ್ನು ಮೂರ್ತಿಸುವಂತೆ ಜೀವನವನ್ನು ಸುಂದರವಾಗಿ, ಬಂಧುರವಾಗಿ ರೂಪಿಸಬಹುದು. ಆಗ ಜೀವನವೇ ಒಂದು ಕಲೆಯಾಗಿ ಪರಿಣಮಿಸುತ್ತದೆ.

ಈ ದೃಷ್ಟಿಯಿಂದ ಪ್ರಪಂಚದಲ್ಲಿ ಆಗಿ ಹೋದ ಮಹಾನುಭಾವರ ಜೀವನವು ಒಂದು ಕಲೆಯೆಂದು ಭಾವಿಸಲು ಅಭ್ಯಂತರವಿಲ್ಲ; ಮಹಾತ್ಮಾ ಗಾಂಧಿಯವರು ತಮಗೆ ಗೊತ್ತಿದ್ದ ಕಲೆಯೆಂದರೆ ಜೀವನ ಕಲೆಯೆಂದು ಹೇಳುತ್ತಿದ್ದರಂತೆ. ಬಹು ವಿಸ್ತಾರವಾದ ಹಾಗೂ ಆಳವಾದ ಅರ್ಥವನ್ನುಳ್ಳ ಮಾತದು.

## ಸೌಂದರ್ಯ ಮತ್ತು ನಿರ್ಮಾಣ:

ಈ ಬರೆಹದಲ್ಲಿ 'ಲಲಿತ ಕಲೆ'ಗಳನ್ನು ಮಾತ್ರ ಅವಗಾಹನೆಗೆ ತೆಗೆದುಕೊಳ್ಳಲಾಗಿದೆ. ಚಿತ್ರವೇ ಆಗಿರಲಿ, ಸಂಗೀತವೇ ಆಗಿರಲಿ, ಮೂರ್ತಿ ಶಿಲ್ಪವೇ ಆಗಿರಲಿ, ವಾಸ್ತುಶಿಲ್ಪವೇ ಆಗಿರಲಿ, ಸಾಹಿತ್ಯವೇ ಆಗಿರಲಿ, ಅದರಲ್ಲಿ ಸೇರಿದ ಅಂಕಿಗಳು ಮುಖ್ಯವಾಗಿ ಎರಡು; ಒಂದು ಸೌಂದರ್ಯ, ಇನ್ನೊಂದು ನಿರ್ಮಾಣ. ಏಕೆಂದರೆ ಸೌಂದರ್ಯದ ನಿರ್ಮಾಣವೇ ಕಲೆ. ಆ ಸೌಂದರ್ಯವು ಚಿತ್ರ ಹಾಗೂ ಶಿಲ್ಪದಂತೆ ರೂಪಸೌಂದರ್ಯವಾಗಿರ ಬಹುದು; ಅಥವಾ ಸಂಗೀತ ಹಾಗೂ ಕಾವ್ಯಗಳಂತೆ ನಾದಸೌಂದರ್ಯ ವಾಗಿರಬಹುದು. ಚಿತ್ರದಲ್ಲಿ ಹಾಗೂ ಶಿಲ್ಪದಲ್ಲಿ ರೂಪ ನಿರ್ಮಾಣವಾಗಿರು ವಂತೆ ಸಂಗೀತದಲ್ಲಿ ನಾದ ನಿರ್ಮಾಣವಾಗಿರುತ್ತದೆ; ಕಾವ್ಯದಲ್ಲಿ ನಾದರೂಪ ಗಳೆರಡೂ ಮೈದೋರುತ್ತವೆ. ನೃತ್ಯದಲ್ಲಿ ರೂಪಸೌಂದರ್ಯದ ಜೊತೆಗೆ ಚಲನವಲನದ ಚೆಲುವೂ ಬೆರೆತಿರುತ್ತದೆ.

## ಪ್ರತಿಭೆ:

ಕಲೆಯಲ್ಲಿ ಮಾನವನು ಸೌಂದರ್ಯವನ್ನು ನಿರ್ಮಿಸಬಲ್ಲನಾದರೆ ಅವನಲ್ಲಿ ಸೌಂದರ್ಯ ದೃಷ್ಟಿ ಬೇಕು. ಜೊತೆಗೆ ಸೌಂದರ್ಯವನ್ನು ಸೃಷ್ಟಿ ಸುವ ಶಕ್ತಿ ಬೇಕು. ಈ ಶಕ್ತಿಯೇ ಪ್ರತಿಭೆ. 'ಪ್ರತಿಭೆ' ಎಂಬ ಶಬ್ದ ಅರ್ಥಪೂರ್ಣವಾಗಿದೆ. ಏಕೆಂದರೆ ಕಲೆಯಲ್ಲಿ ಸೌಂದರ್ಯವು ಪ್ರತಿಬಿಂಬ ಗೊಂಡು ಪ್ರಕಾಶಿಸುತ್ತದೆ. ಕಲಾವಿದನು ತಾನು ಕಂಡ ಸೌಂದರ್ಯವನ್ನು ತನ್ನ ಕಲೆಯಲ್ಲಿ ಪ್ರಕಾಶಮಾನವಾದ ರೀತಿಯಲ್ಲಿ ಪ್ರತಿಬಿಂಬಗೊಳಿಸುತ್ತಾನೆ.

ಸೌಂದರ್ಯವನ್ನು ಕಾಣುವ ಕಣ್ಣಿಗೆ ಸೌಂದರ್ಯವು ಗೋಚರವಾಗು ತ್ತದೆ. ಕಣ್ಣಿನ ಮೂಲಕ ಚೆಲುವೆಂಬುದು ಸೌಂದರ್ಯ ಯೋಗಿಯ ಚಿತ್ತದಲ್ಲಿ ಪ್ರತಿಫಲಿಸುತ್ತದೆ. ಸೌಂದರ್ಯ ದೃಷ್ಟಿಯಿಲ್ಲದವನ ಕಣ್ಣಿಗೆ ಏನು ಕಾಣಬೇಕು ? ಸುತ್ತಲೂ ಸೂರೆಯಾದ ಪ್ರಕೃತಿ ಸೌಂದರ್ಯವು ಅವನಿಗೆ

ಇದ್ದೂ ಇಲ್ಲದಂತೆ ! ಸಕ್ಕರೆ ಸಿಹಿಯಾಗಿರುತ್ತದೆ. ಆದರೆ ನಾಲಗೆಯಲ್ಲಿ ಅದನ್ನು ರುಚಿಗೊಳ್ಳುವ ಶಕ್ತಿಯಿಲ್ಲದಿದ್ದರೆ ಯಾರು ತಾನೇ ಏನು ಮಾಡ ಬೇಕು ? ಹಸಿರು ಎಲೆಗಳಿಂದ ಅಂದವಾಗಿ ಹೂಗಳಿಂದ ಶೋಭೆವಡೆದು ನಿಂದ ಒಂದು ಮರವನ್ನು ಕಂಡು " ಇಷ್ಟೊಂದು ಈ ಎಲೆ ಹೂಗಳ ಬದ ಲಾಗಿ ಎಲ್ಲವೂ ಇಮಾರತಿಯ ಕಟ್ಟಿಗೆಯಾಗಿಯೇ ಈ ಮರ ಬೆಳೆದಿದ್ದರೆ ಎಷ್ಟು ಚನ್ನಾಗುತ್ತಿತ್ತು ?" ಎಂದು ಉದ್ಗಾರ ತೆಗೆದನಂತೆ ಒಬ್ಬ ಇಮಾರ ತಿಯ ಕಟ್ಟಿಗೆಯ ವ್ಯಾಪಾರಿ ! ಇದೊಂದು ಉದಾಹರಣೆ ಸಾಕು, ಆ ಸೌಂದರ್ಯ ದೃಷ್ಟಿಗೆ. ಎಲೆ ಹೂಗಳಿಂದಲ್ಲದೆ ಮರ ಬೆಳೆಯದು ಎಂಬ ಜ್ಞಾನಕ್ಕೂ ಕೂಡ ಇಂಥವರು ಎರವಾಗಿರುತ್ತಾರೆ!

## ಪ್ರತಿಕೃತಿಯಲ್ಲ; ನೂತನಕೃತಿ:

ಕಲೆಯೆಂದರೆ ಕೇವಲ ಕಂಡ ಚೆಲುವಿನ ಪ್ರತಿಬಿಂಬ ಎಂದು ತಿಳಿಯ ಲಾಗದು. ಕಲಾವಿದನು ಪುನಃ ಪುನಃ ತಾನು ಕಂಡ ಸೌಂದರ್ಯ ದಿಂದುಂಟಾಗುವ ಸೌಂದರ್ಯಾನುಭವದ ಪರಿಣಾಮವಾಗಿ ಹೊಸ ಸೌಂದ ರ್ಯವನ್ನು ಕಾಣಬಲ್ಲನು. ವಿವಿಧ ಬಿಂಬಗಳನ್ನು ವಿವಿಧ ರೀತಿಯಲ್ಲಿ ಸಂಯೋಜನೆಗೊಳಿಸುವ ಶಕ್ತಿಯು ಪ್ರತಿಭೆಯಲ್ಲಿ ಸಮಾವೇಶವಾಗುತ್ತದೆ. ' ಕಲೆ ' ಎಂದರೆ ಕೇವಲ ಪ್ರತಿಕೃತಿಯಲ್ಲ; ನೂತನ ಕೃತಿ; ಪ್ರಕೃತಿಯಲ್ಲಿ ಅದರ ಅಂಶಗಳಿರಬಹುದು; ಆದರೆ ಆ ಅಂಶಗಳನ್ನು ಕಂಡು, ಆ ಬಿಂಬ ಗಳನ್ನು ಮನದಲ್ಲಿ ಮರಳಿ ಮೂಡಿಸಿಕೊಂಡು ಅವುಗಳನ್ನು ನೂತನವೂ ಮತ್ತು ಚಮತ್ಕಾರವೂ ಆದ ರೀತಿಯಲ್ಲಿ ಸಂಯೋಜನೆಗೊಳಿಸಬಲ್ಲ ಶಕ್ತಿ ಇದ್ದವನು ಮಾತ್ರ ಕಲಾವಿದನಾಗಬಲ್ಲನು.

ಒಂದು ಉದಾಹರಣೆಯಿಂದ ಈ ಮಾತು ಸ್ಪಷ್ಟವಾದೀತು. ಚಿತ್ರ ಕಾರನಾದವನು ಪ್ರಕೃತಿಯ ಅನೇಕ ದೃಶ್ಯಗಳನ್ನು ನೋಡಿರುತ್ತಾನೆ. ಆ ದೃಶ್ಯಗಳ ಸಾರವನ್ನೇ ಹೀರಿ ತನ್ನ ಚಿತ್ತದಲ್ಲಿ ಗುಪ್ತವಾಗಿ ಇರಿಸಿಕೊಂಡಿರು ತ್ತಾನೆ. ಯಾವುದೋ ಒಂದು ಸನ್ನಿವೇಶದ ಪರಿಣಾಮವಾಗಿ ಯಾವುದೋ ಒಂದು ಲಹರಿ ಬಂದು ಅವನಲ್ಲಿ ಹುದುಗಿಕೊಂಡಿದ್ದ ಬಿಂಬಗಳಲ್ಲಿ ಕೆಲವನ್ನು

ಜಾಗೃತಗೊಳಿಸುತ್ತದೆ. ಆಗ ಅವನು ಆ ಬಿಂಬಗಳನ್ನು ತನ್ನ ಕಲ್ಪನಾ ಸಾಮರ್ಥ್ಯದಿಂದ ಹೊಸ ಯೋಜನೆಯಲ್ಲಿ ಅಳವಡಿಸಿ ಹೊಸ ಚಿತ್ರ ಸೃಷ್ಟಿಯನ್ನು ಮೂಡಿಸುತ್ತಾನೆ. ಹೊಸ ಅರ್ಥವನ್ನು ತನ್ನ ರೇಷೆ ರೇಷೆಗಳಲ್ಲಿ ತುಂಬುತ್ತಾನೆ; ವರ್ಣವಿನ್ಯಾಸದಲ್ಲಿ ಜೀವನದ ನೂತನ ಸನ್ನಿವೇಶವನ್ನು ಚಿತ್ರಿಸುತ್ತಾನೆ; ಜೊತೆಗೆ ತನ್ನ ಭಾವಭಾವನೆಗಳನ್ನು ಆ ರೇಷಾವಿಲಾಸದ ಆ ವರ್ಣವೈಖರಿಯಲ್ಲಿ ಸುಳುಹುಗಾಣಿಸುತ್ತಾನೆ. ಆಗ ಅವನ ಚಿತ್ರ ಬರಿ ದೃಶ್ಯವಾಗದೆ ದೃಶ್ಯಕಾವ್ಯವಾಗಿ ಪರಿಣಮಿಸುತ್ತದೆ.

ಭಾರತ ದೇಶದ ಚಿತ್ರಕಾರರ ರಾಗಮಾಲಿಕಾ ಚಿತ್ರಗಳನ್ನು ಅವಲೋಕಿಸಿದರೆ ಈ ಮಾತಿನ ಯಥಾರ್ಥತೆ ಹೊಳೆದೀತು. ಅದರಂತೆ ಮೈಕಲ್ ಎಂಜಿಲೋ, ಲಿಯನಾರ್ಡೊ ಡಾ. ವ್ಹಿನ್ಸಿ, ಡಾನ್ಟೇ ಗ್ಯಾಬ್ರಿಯಲ್ ರಸೆಟಿ ಮೊದಲಾದ ವಿದೇಶಿಯ ಚಿತ್ರಕಾರರ ಚಿತ್ರಗಳು ಇದೇ ಮಾದರಿಯವು.

### ಕಲೆಗೆ ನೆರವಾಗುವ ಪ್ರವೃತ್ತಿಗಳು:

ಸೃಷ್ಟಿಕರ್ತನೂ ಒಬ್ಬ ಕಲಾವಿದ. ವಿಶ್ವವೇ ಅವನು ನಿರ್ಮಿಸಿದ ಕಲೆ; ಅದರಲ್ಲಿ ಅವನು ಸೌಂದರ್ಯದ ದರ್ಶನವನ್ನು ಮಾನವನಿಗೆ ನಿತ್ಯ ಮಾಡಿಸುತ್ತಾನೆ; ಅವನು ದಯಪಾಲಿಸುವ ದರ್ಶನವನ್ನು ಪಡೆಯದಿದ್ದರೆ ಅದು ನಮ್ಮ ತಪ್ಪು.

ವಿಶ್ವಕಲಾವಿದನು ಒಂದು ಯೋಜನೆ ಮಾಡಿದಂತಿದೆ. ಅವನು ಮಾನವನ ಸುತ್ತಲೂ ಪ್ರಕೃತಿ ಸೌಂದರ್ಯವನ್ನು ಹರಡಿ ಅದನ್ನು ಗ್ರಹಿಸುವ ಶಕ್ತಿಯನ್ನು ಮಾನವನಲ್ಲಿ ಇಟ್ಟಿದ್ದಾನೆಂದು ಕಾಣುತ್ತದೆ; ಸೌಂದರ್ಯ ರಸಾನುಭವ ಶಕ್ತಿಯೊಡನೆ ಸೌಂದರ್ಯ ನಿರ್ಮಾಣ ಶಕ್ತಿಯನ್ನು ಅವನು ಕಲಾವಿದನಲ್ಲಿ ಇಟ್ಟಿರುತ್ತಾನೆನ್ನಬಹುದು. ' God has made man in his own image ಎಂಬ ಮಾತನ್ನು ಈ ಅರ್ಥದಲ್ಲಿಯೂ ಗ್ರಹಿಸಬಹುದು.

ಮನಶ್ಶಾಸ್ತ್ರಜ್ಞರ ಅಭಿಪ್ರಾಯದ ಮೇರೆಗೆ ಮಾನವನಲ್ಲಿರುವ ಸಹಜ ಪ್ರವೃತ್ತಿಗಳಲ್ಲಿ ರಚನಾ ಪ್ರವೃತ್ತಿಯೂ ಒಂದು. ಈ ರಚನಾ ಪ್ರವೃತ್ತಿ

ಯಿಂದಾಗಿಯೇ ಅವನು ಕಲಾ ನಿರ್ಮಾಣಕ್ಕೆ ಪ್ರವೃತ್ತನಾಗುತ್ತಾನೆ. ಆದುದರಿಂದಲೇ ನಿಜವಾದ ಕಲಾವಿದನು ಸ್ವಯಂಪ್ರೇರಿತನಾಗಿ ಕೆಲಸ ಮಾಡುವನೆಂದು ಹೇಳುತ್ತಾರೆ.

ತನ್ನ ಕಲೆಯತ್ತ ಕಲಾವಿದನನ್ನು ಪ್ರವೃತ್ತಗೊಳಿಸುವ ಇನ್ನೊಂದು ಪ್ರವೃತ್ತಿಯೆಂದರೆ ಆತ್ಮಪ್ರೌಢಿಮೆ. ಅವನ ಕಲಾಸಾಧನೆಗೆ ನೇರವಾದ ನೆರವು ಆತ್ಮಪ್ರೌಢಿಮೆಯಿಂದಲೇ ದೊರೆಯುತ್ತದೆ. ಅವನ ಕಲೆಯು ವಿಕಾಸ ಹೊಂದುವದು ಸಾಧನೆಯಿಂದ ತಾನೆ ? ಆತ್ಮಪ್ರೌಢಿಮೆಯ ಉತ್ಸಾಹ ದೊರೆಯದಿದ್ದರೆ ಸಾಧನೆ ನಡೆಯದು. ಸಾಧನೆ ನಡೆಯದಿದ್ದರೆ ಕಲೆ ಸಾಧಿಸದು. ಬರಿ ಅಭಿರುಚಿ ಸಾಲದು; ಆತ್ಮಪ್ರೌಢಿಮೆಯು ಪ್ರೇರಿಸುವ ಪ್ರಯತ್ನವು ಮುಖ್ಯವಾಗಿ ಬೇಕು. ತಪಸ್ಸಿನಿಂದಲ್ಲದೆ ಕಲೆ ಸಾಧ್ಯವಾಗದು; ಮೇಲೆ ಹೇಳಿದಂತೆ ಪ್ರಯತ್ನವನ್ನು ಪ್ರಚೋದಿಸುವ ಪ್ರಯತ್ನವೊಂದು ಕಲಾವಿದನ ಅಂತರಂಗದಲ್ಲಿ ಇರುತ್ತದೆ. ಅದೇ ಆತ್ಮ ಪ್ರೌಢಿಮೆ.

ಅಂತೂ ಹೊರಗಿನ ಸೌಂದರ್ಯ ಹಾಗೂ ಒಳಗಿನ ಪ್ರವೃತ್ತಿಗಳ ಸಂಯೋಗದಿಂದ ಕಲೆ ನಿರ್ಮಾಣವಾಗುತ್ತದೆ. ಸೌಂದರ್ಯವು—ಅದು ಪ್ರಕೃತಿಯ ಸೌಂದರ್ಯವಾಗಿರಬಹುದು ಅಥವಾ ಜೀವನ ಸೌಂದರ್ಯವಾಗಿರಬಹುದು— ಕಲಾವಿದನನ್ನು ಕೌತುಕ ಪ್ರವೃತ್ತಿಯ ಮುಖಾಂತರ ಪ್ರೇರಿಸುತ್ತದೆ; ಹೀಗೆ ತನ್ನನ್ನು ಕರೆಯುವ ಸೌಂದರ್ಯಕ್ಕೆ ಕಲಾವಿದನು ತನ್ನಲ್ಲಿರುವ ಆತ್ಮ ಪ್ರೌಢಿಮೆ, ಕುತೂಹಲ, ರಚನಾಪ್ರವೃತ್ತಿ ಕ್ರೀಡಾ ಪ್ರವೃತ್ತಿ—ಇವುಗಳ ಮೂಲಕ ತನ್ನದೇ ಆದ ರೀತಿಯಲ್ಲಿ ಓಗೊಡುತ್ತಾನೆ.

ತನ್ನದೇ ಆದ ರೀತಿಯೆಂದು ಹೇಳಿದೆನಲ್ಲವೇ? ಅದೇ ಅವನ ಪ್ರತಿಭೆ. ಅದನ್ನು ' ಗತಿ ' ಎಂದೂ ಹೇಳುತ್ತಾರೆ. ಚಿತ್ರಗಾರನು ಚಿತ್ರದ ಮೂಲಕ ತನ್ನ ಸೌಂದರ್ಯದ ಕರೆಗೆ ಓಗೊಡುತ್ತಾನೆ. ಸಂಗೀತಗಾರನು ಸಂಗೀತದ ಮುಖಾಂತರ ತನ್ನ ಮೇಲೆ ಸೌಂದರ್ಯವು ಉಂಟು ಮಾಡುವ ಪ್ರಭಾವಕ್ಕೆ ಪ್ರತಿಕ್ರಿಯೆಯನ್ನು ಮಾಡುತ್ತಾನೆ; ಕವಿಯಾದವನು ಕಾವ್ಯರಚಿಸಿ ಪ್ರಕೃತಿ ಸೌಂದರ್ಯವನ್ನೋ ಜೀವನ ಸೌಂದರ್ಯವನ್ನೋ ಪ್ರತಿಬಿಂಬಿಸಿ ತೃಪ್ತಿಪಡುತ್ತಾನೆ.

ಅಂತೂ ಕಲೆಯೆಲ್ಲದರ ಪರಿಣಾಮ ಕಲಾವಿದನ ದೃಷ್ಟಿಯಿಂದ ಆತ್ಮ ತೃಪ್ತಿ. ಆ ಆತ್ಮತೃಪ್ತಿಯು ಭಾವವಿಮೋಚನೆಯಿಂದ ಆಗುತ್ತದೆ; ಕಲಾವಿದನು ಲಹರಿಗೆ ಪಕ್ಕಾದಾಗ ಭಾವವಿಮೋಚನೆಯ ದಾರಿಯಲ್ಲಿ ಕೆಲಸ ಮಾಡುತ್ತಾನೆ; ತನ್ನ ನಿರ್ಮಾಣ ಕಾರ್ಯ ಕೈಗೂಡಿದಾಗ ಅವನಿಗೆ ಆತ್ಮ ತೃಪ್ತಿಯಾದರೆ ಆಶ್ಚರ್ಯವಿಲ್ಲ. ಅವನಲ್ಲಿರುವ ವಿಶಿಷ್ಟವಾದ ಪ್ರತಿಭೆಯಿಂದಲೇ ಕಲೆ ಹೊಮ್ಮಿರುತ್ತದೆ; ಈ ಪ್ರತಿಭೆಯು, ಅವನಲ್ಲಿ ಯುಗ ಯುಗಗಳಲ್ಲಾದ ಅನುಭವದ ಪರಿಣಾಮವಾಗಿ ಇಳಿದು ಬಂದಿರುತ್ತದೆ. ಅವನಲ್ಲಿ ಹುದುಗಿದ ಪ್ರತಿಭೆಯನ್ನು ಪೋಷಿಸಲು ಮತ್ತು ಹೊರಹೊಮ್ಮಿಸಲು ಮೇಲೆ ಹೇಳಿದ ಪ್ರವೃತ್ತಿಗಳು ನೆರವಾಗುತ್ತವೆ. ಸ್ವಯಂಪ್ರೇರಣೆಯಿಂದ ಕಲಾನಿರ್ಮಾಣವು ಆನಂದವನ್ನು ಉಂಟು ಮಾಡುವದರಿಂದ ಕಲಾವಿದನಿಗೆ ಅದು ಕ್ರೀಡೆಯಾಗಿ ಪರಿಣಮಿಸುತ್ತದೆ; ಕಲಾವಿದನು ತನ್ನ ಕಲೆಯ ಮೂಲಕ ಆಟವಾಡುತ್ತಾನೆ; ಆನಂದವನ್ನು ಪಡೆಯುತ್ತಾನೆ; ಅನಂದವೇ ಕಲೆಯ ಉದ್ದೇಶವೆಂಬ ಮಾತು-ಈ ದೃಷ್ಟಿಯಿಂದ ಯಥಾರ್ಥವಾಗಿದೆ.

— — — —

# ನಮ್ಮ ಲಿಪಿ

ಮೊಗ್ಗಿನಂದದಿ ಕೆಲವು ಮಲರಿನಂದದಿ ಹಲವು
ಕುಡಿ, ಹೀಚು, ಮಿಡಿ, ಕಾಯ್ಗಳಂತೆ ಕೆಲವು
ಕನ್ನಡಕ್ಕರಗಳಿವು ಬಳ್ಳಿಯನು ಏರಿಹವು
ಬಗೆಯ ಬಳ್ಳಿಯನೆ ಅಲ್ಲಾಡಿಸುವವು.

—(ನಕ್ಷತ್ರಗಾನ) ಲಿಪಿಲತೆ

'ನುಡಿದರೆ ಮುತ್ತಿನ ಹಾರದಂತಿರಬೇಕು' ಎಂದು ಬಸವಣ್ಣನವರು ಹೇಳಿದ್ದಾರೆ. ಬರೆದರೆ ಮುತ್ತಿನ ಸಾಲಿಟ್ಟಂತೆ ಬರೆಯಬೇಕೆಂಬ ಮಾತು ಕನ್ನಡದಲ್ಲಿ ರೂಢವಾಗಿದೆ. ಅಕ್ಷರಗಳು ಮುತ್ತಿನಂತೆ ದುಂಡಗಾಗಿದ್ದರೆ ಮುತ್ತಿನ ಸಾಲಿಟ್ಟಂತೆ ಬರೆಯುವುದು ಸಾಧ್ಯ. ಕನ್ನಡ ಅಕ್ಷರಗಳು ನಿಜವಾಗಿಯೂ ಮುತ್ತಿನಂತೆ ದುಂಡಗಿವೆ; ಆದುದರಿಂದಲೇ ಮುತ್ತಿನ ಸಾಲಿಟ್ಟಂತೆ ಬರೆಯಬೇಕೆಂಬ ಮಾತು ಕನ್ನಡದಲ್ಲಿ ರೂಢವಾಗಿರಬೇಕು. ನಿಲವಿನಲ್ಲಿ, ಒಲವಿನಲ್ಲಿ, ಚೆಲುವಿನಲ್ಲಿ ಕನ್ನಡ ಲಿಪಿಯ ಒಂದೊಂದು ಅಕ್ಷರವೂ ಒಂದೊಂದು ಮುತ್ತು.

ಜೀವನದ ವಿವಿಧ ಅಂಗಗಳಲ್ಲಿ, ವಿವಿಧ ರಂಗಗಳಲ್ಲಿ ವಿಶಿಷ್ಟವಾದ ಕಲೆಯನ್ನು ಬೆಳಸಿಕೊಂಡು ಬಂದಂತೆ ಕನ್ನಡಿಗರು ತಮ್ಮ ಲಿಪಿಕ್ಷೇತ್ರದಲ್ಲಿಯೂ ಒಂದು ವಿಶಿಷ್ಟವಾದ ಕಲೆಯನ್ನು ಸಾಧಿಸಿದ್ದಾರೆ. ಕನ್ನಡ ಲಿಪಿಯು ಕನ್ನಡಿಗರ ಕಲಾಪ್ರವೃತ್ತಿಗೆ ಸಾಕ್ಷಿಯಾಗಿ ನಿಂತಿದೆ: ಕನ್ನಡ ಲಿಪಿಯ ಮೂಲ ಯಾವುದು ?—ಎಂಬುದು ನಮ್ಮ ಮುಂದಿರುವ ಪ್ರಶ್ನೆ. ಅದರ ಮೂಲ ಬೇರೆಯಿದ್ದರೂ ಇದ್ದಿರಬಹುದು. ಆದರೆ ಅದನ್ನು ದುಂಡುಗೊಳಿಸಿದ, ಅಂದಗೊಳಿಸಿದ, ಮುತ್ತಿನ ಹಾರವಾಗಿಸಿದ ಶ್ರೇಯಸ್ಸು ಸಂಪೂರ್ಣವಾಗಿ ಕನ್ನಡಿಗರದು. ಅವರ ಬೆರಳ ಸೋಂಕಿನಿಂದ ಮೂಲದ ಅದಾವುದೋ ಲಿಪಿ ರಮಣೀಯವಾಗಿ ರೂಪುಗೊಂಡಿತು.

ಕನ್ನಡ ಲಿಪಿಮಾಲೆ ಒಂದು ಕಲಾಮಾಲೆ. ಕನ್ನಡದ ಒಂದೊಂದೇ ಅಕ್ಷರವನ್ನು ಬರೆದು ಕೊರೆದು ಅದನ್ನು ಕಲೆಯು ಒರೆಗಲ್ಲಿಗೆ ಹಚ್ಚಿನೋಡಿದರೆ ಈ ಮಾತಿನ ದಿಟವು ಹೊಳೆಯದಿರದು. ಒಂದೊಂದು ಅಕ್ಷರದ ಸುಳುಹು ಹೊಳಹು ಅದರದರ ಸೌಂದರ್ಯಕ್ಕೆ ಸಾಕ್ಷಿ. ಈ ಸುಳುಹು ಹೊಳೆಹುಗಳೇ ಕನ್ನಡ ಲಿಪಿಯ ನೆಲೆಕಲೆಯಾದಂತಿವೆ. ಕನ್ನಡಿಗರ ಕಲಾಭಿರುಚಿಯ ಪ್ರತೀಕವಾಗಿ ಅದರ ಲಿಪಿ ರೂಪಗೊಂಡಿದೆಯೆಂದು ಹೇಳಲು ಯಾವ ಅಭ್ಯಂತರವೂ ಇರಲಾರದು.

ಕನ್ನಡ ಅಕ್ಷರಗಳಲ್ಲಿ ಕೋನಗಳು ಹುಡುಕಿದರೂ ದೊರೆಯವು. ಪ್ರತಿ ವರ್ಣವೂ ದುಂಡಗಾಗಿ ನಿಸರ್ಗನಿಯಮಬದ್ಧವಾಗಿ ಕಲಾಪೂರ್ಣವಾಗಿ ಆಕಾರ ತಳೆದಿದೆ. ನಿಸರ್ಗದಲ್ಲಿ ಎಲ್ಲಿ ನೋಡಿದರೂ ಸುಂದರವಾದ ದುಂಡುತನವೇ ತೋರುವುದಲ್ಲದೆ ಕೋಚು ಕೋನಗಳನ್ನುಳ್ಳ ರೂಪಗಳು ತೋರುವುದೇ ಇಲ್ಲ. ಎಲೆಯಂತೆ, ಹೂವಿನಂತೆ, ಹಣ್ಣಿನಂತೆ ಕನ್ನಡ ಅಕ್ಷರಗಳ ಆಕಾರ. ಬಳ್ಳಿಯ ಕುಡಿಯಂತೆಯೂ ಕೆಲವು ಉಂಟು. ಸುಳುಹಿನೊಳಗೆ ಸುಳುಹು, ನಂಟಿನೊಡನೆ ನಂಟು; ಗಂಟಿನೊಳಗ ಗಂಟು. ಆದುದರಿಂದಲೇ ಗುಣಿತಾಕ್ಷರ ಮಾಲೆಗೆ ಕನ್ನಡದಲ್ಲಿ 'ಬಳ್ಳಿ' ಎಂಬ ಒಳ್ಳೆಯ ಹೆಸರು ಬಂದಿದೆ. 'ಕ' ಮೊದಲು ಮಾಡಿಕೊಂಡು 'ಕಃ'ದ ವರೆಗೆ ಗುಣಿತಾಕ್ಷರಗಳನ್ನೆಲ್ಲ ಬರೆದು ನೋಡಬೇಕು. ಆಗ ಹೊಳೆಯುವುದು 'ಬಳ್ಳಿ' ಎಂಬ ಹೆಸರಿನ ಯಥಾರ್ಥತೆ. ಕನ್ನಡಿಗರು ತಾವು ನಿಸರ್ಗದಲ್ಲಿ ಕಂಡ ದುಂಡುತನದ ಚೆಲುವಿನಲ್ಲಿ ತಮ್ಮ ಲಿಪಿಯನ್ನು ಎರಕಹೊಯ್ದಂತಿದೆ.

ಕನ್ನಡ ಲಿಪಿಯ ಇನ್ನೊಂದು ವೈಶಿಷ್ಟ್ಯವೆಂದರೆ ಅದರಲ್ಲಿ ಕಂಡುಬರುವ ಅರ್ಥಸೂಚನೆ. ಈ ಮಾತು ವಿಶೇಷತಃ ಸ್ವರಾಕ್ಷರಗಳಿಗೆ ಅನ್ವಯಿಸುತ್ತದೆ. ಹಾಗಿರುವುದು ಯಥಾರ್ಥವೇ. ಏಕೆಂದರೆ ಅಕ್ಷರಕ್ಕೆ ಸ್ವರವೇ ಮೂಲ. ಸ್ವರಾಕ್ಷರಗಳತ್ತ ತಿಳಿನೋಟವನ್ನು ಬೀರಿದರೆ ಅವುಗಳ ಒಳ ಅರ್ಥ ತಾನಾಗಿಯೇ ಹೊಳೆಯುವುದು. ಹ್ರಸ್ವಸ್ವರಗಳ ಗಂಟುಗಳೆಲ್ಲ ಒಳಗಂಟುಗಳು. ಅ, ಇ, ಉ, ಎ,—ಇವೆಲ್ಲವುಗಳಲ್ಲಿ ಒಳಗಂಟುಗಳೇ ಕಂಡುಬರುತ್ತವಲ್ಲವೇ ? ದೀರ್ಘ ಸ್ವರಗಳ ಗಂಟುಗಳು ಹೆಚ್ಚಾಗಿ ಹೊರಗಂಟುಗಳು. ಆ, ಈ,

ಮೊದಲಾದ ಅಕ್ಷರಗಳನ್ನು ಪರಿಶೀಲಿಸಬೇಕು. ಗುಣಿತಾಕ್ಷರಗಳಲ್ಲಿ ದೀರ್ಘ ಸ್ವರವನ್ನು ಸೂಚಿಸುವ ಗುರುತು(ೀ)ಹೊರಗಂಟಿನಿಂದ ಕೂಡಿದ ಗುರುತೆಂಬು ದನ್ನು ಗಮನಿಸಬೇಕು.

ಆ ಆ ಅಕ್ಷರಗಳನ್ನು ಉಚ್ಚರಿಸುವಾಗ ಆಡುವ ಉಸುರಿನ ವಿವಿಧ ವಿಲಾಸಗಳನ್ನು ಸೂಚಿಸುವಂತೆ ಆ ಆ ಅಕ್ಷರಗಳನ್ನು ಕನ್ನಡಿಗರು ರೂಪಿಸಿ ಕೊಂಡಿರಬಹುದೆಂಬ ಕಲ್ಪನೆಗೆ ಅವಕಾಶವುಂಟು. ಉದಾಹರಣೆಗಾಗಿ 'ಉ' ಸ್ವರವನ್ನು ಉಚ್ಚರಿಸುವಾಗ ಉಸಿರು ಹ್ರಸ್ವವಾಗಿ, ಮೊಟಕಾಗಿ, ಮೇಲ್ಮೊಗ ವಾಗಿ ನಿಂತು ಬಿಡುತ್ತದೆ. ಅದರೆ 'ಊ' ಅಕ್ಷರವನ್ನು ಉಚ್ಚರಿಸುವಾಗ ಉಸಿರು ದೀರ್ಘವಾಗಿ ಕಂಠದೊಳಗೆ ಸೇರಿ ಲಯವಾಗುತ್ತದೆ. ಅದುದರಿಂದ 'ಊ' ಅಕ್ಷರದ ಹೆಚ್ಚಿನ ಕೊಂಡಿಯು ಅದರ ದೀರ್ಘೋಚ್ಚಾರವನ್ನೂ ಕೆಳಗೆ ಇಳಿಯುವ ಅದರ ಕೊನೆಯು ಕಂಠದಲ್ಲಿ ತೂರಿಹೋಗುವ ಉಸಿರನ್ನೂ ಸೂಚಿಸುತ್ತವೆ. ಇದರಂತೆ ಉಳಿದ ಸ್ವರಾಕ್ಷರಗಳಲ್ಲಿರುವ ಅರ್ಥಸೂಚನೆ ಯನ್ನು ಪರಿಶೀಲಿಸಬಹುದು; ಹೀಗೆ ಕನ್ನಡ ಲಿಪಿಯು ಸುಂದರವಾಗಿರು ವುದಲ್ಲದೆ ಉಚಿತವೂ ಆಗಿದೆ.

ದುಂಡುತನವು ನಮ್ಮ ಲಿಪಿ ಸೌಂದರ್ಯಕ್ಕೆ ಕಾರಣವಾಗಿದೆಯೆಂಬು ದನ್ನು ಈ ಮೊದಲೆ ಹೇಳಿಯಾಯಿತು. ಅದೇ ರೀತಿ ಗಂಡುತನವೂ ಕನ್ನಡ ಲಿಪಿಯ ಒಂದು ವೈಶಿಷ್ಟ್ಯ. ಕನ್ನಡ ಅಕ್ಷರಗಳ ಕೊಂಬು ಅವುಗಳ ಗಂಡು ತನದ ಗುರುತು ಎಂದು ಹೇಳಬಹುದು. ನಮ್ಮ ವ್ಯಂಜನಾಕ್ಷರಗಳಲ್ಲಿ ಕೊಂಬು ಧರಿಸಿದ ಅಕ್ಷರಗಳೇ ಹೆಚ್ಚು. ಅವುಗಳ ಬಿಂಕು ಬೆಡುಗಗಳು ಕೊಂಬುಗಳಲ್ಲಿ ಎದ್ದು ಕಾಣುತ್ತವೆ. 'ಕೊಂಬು', ಕೋಡು ಮೊದಲಾದ ಶಬ್ದಗಳು ಬಿರುದನ್ನು ಸೂಚಿಸುವ ಶಬ್ದಗಳೆಂಬುದನ್ನು ಈ ಸಂದರ್ಭದಲ್ಲಿ ಲಕ್ಷಿಸಬೇಕು. ಕನ್ನಡ ಲಿಪಿ ಬಿರುದು ಮೆರೆಯುವ ಲಿಪಿ.

ಕನಡ ಲಿಪಿವೈಭವಕ್ಕೆ ಕನ್ನಡಿಗರ ಕಲಾಪ್ರೇಮ ಕಾರಣವಾಗಿದ್ದಂತೆ ಕನ್ನಡ ಶಿಲಾಲೇಖ ಸಂಪ್ರದಾಯವೂ ಕಾರಣವಾಗಿರಲು ಸಾಕು, ಶಿಲಾ ಶಾಸನಗಳು ಕನ್ನಡದಲ್ಲಿ ಕ್ರಿ. ಶ. ಐದನೆಯ ಶತಮಾನದಿಂದ ಬರೆಯಲ್ಪಡುತ್ತ ಬಂದಿವೆಯೆಂಬುದು ಶಿಲಾಶಾಸನಗಳಿಂದಲೇ ತಿಳಿದುಬರುತ್ತದೆ. ಹಿಂದಿನ ಆ ಶತ

ಮಾನಗಳು ಕನ್ನಡಿಗರು ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಿ ಕನ್ನಡದ ಬಾವುಟ ವನ್ನು ಎತ್ತಿ ಮೆರೆಸಿದ ಶತಮಾನಗಳು. ಶಿಲಾಶಾಸನ ಲೇಖನವು ಕನ್ನಡಿಗರ ವಿಶಿಷ್ಟವಾದ ಸಂಪ್ರದಾಯಗಳಲ್ಲಿ ಒಂದಾಗಿದ್ದಿತು. ಶಿಲೆಯಲ್ಲಿ ಆಗ ಶಾಸನ ಗಳನ್ನು ಕೆತ್ತಿದವರು ತಮ್ಮ ಆತ್ಮತೃಪ್ತಿಗಾಗಿಯೋ ದೊರೆಗಳ ಮೆಚ್ಚಿಕೆ ಗಾಗಿಯೋ ಲೇಖನ ಸೌಂದರ್ಯದತ್ತ ಹೆಚ್ಚು ಗಮನ ಪೂರೈಸುತ್ತ ಬಂದ ರೆಂದು ಕಾಣುತ್ತದೆ. ತತ್ಪರಿಣಾಮವಾಗಿ ನಮ್ಮ ಲಿಪಿ ಶತಶತಮಾನಗಳಲ್ಲಿ ಅಂದ ಅಂದವಾಗುತ್ತ ಬಂದಿತು. ೧೨ ನೆಯ ಶತಮಾನದಲ್ಲಂತೂ ಕನ್ನಡ ಲಿಪಿ ಸೌಂದರ್ಯವು ಶಿಖರವನ್ನೇರಿತು. ಲಿಪಿಲಾವಣ್ಯದ ದೃಷ್ಟಿಯಿಂದ ನಾವು ವಿಶೇಷತಃ ಹೊಯ್ಸಳ ದೊರೆಗಳಿಗೆ ಋಣಿಯಾಗಿದ್ದೇವೆಯೆಂದು ಹೇಳ ಬಹುದು. ಆ ದೊರೆಗಳು ವಾಸ್ತುಶಿಲ್ಪನಿರ್ಮಾಣಕ್ಕೆ ಉತ್ತೇಜನ ಕೊಟ್ಟರೆಂಬ ಸಂಗತಿ ಸುಪ್ರಸಿದ್ಧವಾಗಿದೆ. ಆ ದೊರೆಗಳ ಕಾಲದಲ್ಲಿ ರಚಿತವಾದ ಸುಂದರ ದೇವ ಮಂದಿರಗಳಲ್ಲಿ ತೋರಿ ಬರುವ ಶಿಲ್ಪಕಲಾನೈಪುಣ್ಯವು ತಲೆದೂಗಿಸು ವಂತಹದು. ವಾಸ್ತು ಶಿಲ್ಪದ ಜೊತೆಗೆ ಮೂರ್ತಿಶಿಲ್ಪ ಕೂಡಿ ಒಪ್ಪವಡೆದ ಆ ಮಂದಿರಗಳಲ್ಲಿ ಅಕ್ಷರಗಳನ್ನು ಅಂದವಾಗಿ ಕೆತ್ತಲು ಹೊಯ್ಸಳ ಅರಸರು ಪ್ರೋತ್ಸಾಹ ನೀಡಿದುದರಿಂದ ಕನ್ನಡ ಲಿಪಿಯು ಹೆಚ್ಚಿನ ಚೆಲುವನ್ನು ತಳೆಯಲು ದಾರಿಯಾಯಿತು. ಅಲ್ಲದೆ ನಮ್ಮ ಲಿಪಿಯ ಸ್ವಭಾವವು ಕನ್ನಡ ಕಲಾವಿದರ ಭಾವತೃಪ್ತಿಗೆ ಅನುಕೂಲವಾಯಿತು, ಏಕೆಂದರೆ ಕನ್ನಡ ಅಕ್ಷರ ಗಳು ಕಲ್ಲಿನಲ್ಲಿ ದಳವೇರಿ ಅರಳಬಲ್ಲ ಅಕ್ಷರಗಳು; ಸುಳು ಸುಳುಹಾಗಿ ಶಿಲೆಯಲ್ಲಿ ಸುಳಿಯುಬಲ್ಲ ಅಕ್ಷರಗಳವು.

ಒಟ್ಟಿನಲ್ಲಿ ಕಲಾವಿದರ ಕೈವಾಡ ಕೈಕುಸುರುಗಳು ನಮ್ಮ ಲಿಪಿಯಲ್ಲಿ ಒಡಮೂಡಿವೆ. ಕನ್ನಡಿಗರ ಸಹಜ ಸೌಂದರ್ಯದೃಷ್ಟಿ ಅದರಲ್ಲಿ ಒಡ ಮೂಡಿದೆ. ಕೈಬರೆಹದ ಪತ್ರಿಕೆಗಳನ್ನು ಹೊರಡಿಸುವ ರೂಢಿ ಇನ್ನೂ ಅಲ್ಲಲ್ಲಿ ಕಂಡುಬರುತ್ತದಷ್ಟೇ ? ಮುದ್ದಾದ ಅಕ್ಷರಗಳನ್ನೊಳಗೊಂಡ ಕೈಬರಹದ ಪತ್ರಿಕೆಗಳಿಗೆ ಬಹುಮಾನವನ್ನು ಕೊಡುವ ಏರ್ಪಾಡು ಮಾಡಿದರೆ ಕಲೆಗೆ ಉತ್ತೇಜನ ದೊರೆತಂತಾಗುವುದಲ್ಲದೆ ಕನ್ನಡ ಲಿಪಿ-ಲಾವಣ್ಯ ಪ್ರದರ್ಶನಕ್ಕೂ ಆಸ್ಪದ ದೊರೆಯುವುದರಲ್ಲಿ ಸಂದೇಹವಿಲ್ಲ.

— — — —

# ಲಕ್ಕುಂಡಿಯ ವಾಸ್ತುಶಿಲ್ಪ

ಲಕ್ಕುಂಡಿ ಊರ ಹೆಸರನ್ನು ನೀವು ಕೇಳಿರಬಹುದು, ಕೇಳಿರಲಿಕ್ಕಿಲ್ಲ. ಹೆಸರು ತೀರ ಸಾಮಾನ್ಯವಾದುದು ನಿಜ. ಬೇಲೂರು, ಹಳೆಬೀಡು, ಬಾದಾಮಿ, ಪಟ್ಟದಕಲ್ಲು, ಐಹೊಳೆ— ಈ ಹೆಸರುಗಳಂತೆ ಒಮ್ಮೆಲೇ ಮನ ವನ್ನು ಹಿಡಿದು ನಿಲ್ಲಿಸುವ ಹೆಸರದಲ್ಲ. ಬೇಲೂರು, ಹಳೆಬೀಡು, ಬಾದಾಮಿ, ಪಟ್ಟದಕಲ್ಲು ಇವೇ ಮೊದಲಾದ ಊರುಗಳ ಹೆಸರಿನಲ್ಲಿ ಹಿಂದಿನ ಯಾವುದೋ ಒಂದು ನೆನಪಿನ ಕಂಪು ತುಂಬಿದಂತೆ ಭಾಸವಾಗುತ್ತದೆ. ಆದರೆ ಲಕ್ಕುಂಡಿಯ ಸಂಬಂಧದಲ್ಲಿ ಇತಿಹಾಸದ ಮಧುರ ಸಂಪರ್ಕಕ್ಕೆ ಏಕೆ ಅವಕಾಶ ಉಳಿಯಲಿಲ್ಲವೋ ! ಹೋಗಲಿ, ಅಲ್ಲಿಯ ಆ ವಾಸ್ತುಶಿಲ್ಪ ಸಂಪತ್ತಾದರೂ ಆ ಊರ ಹೆಸರಿನಲ್ಲಿ ತಕ್ಕ ಗಾಂಭೀರ್ಯವನ್ನೂ ಮಾಧುರ್ಯವನ್ನೂ ತುಂಬಬಹುದಾಗಿದ್ದಿತಲ್ಲ ?

ಅದೇನೇ ಇರಲಿ; ಲಕ್ಕುಂಡಿಯ ವಾಸ್ತುಶಿಲ್ಪ ಘನವಾದುದು. ಈ ದೃಷ್ಟಿಯಿಂದ ಲಕ್ಕುಂಡಿಗೆ ಪ್ರಚಾರ ದೊರೆಯಬೇಕಾದುದು ಅತ್ಯಾವಶ್ಯಕ. ಆ ಊರಿಗೆ ಹೋಗಿ ಅಲ್ಲಿಯ ಆ ವಾಸ್ತುಶಿಲ್ಪ ಸೌಂದರ್ಯವನ್ನು ಕಣ್ಮನ ಗಳಲ್ಲಿ ತುಂಬಿಕೊಂಡವರು ಸುಮ್ಮನೆ ಕೂಡ್ರಬೇಕೆ ? ಛೆ, ಹಾಗೆ ಕುಳ್ಳಿರ ಲಾಗದು. ಒಮ್ಮೆ ನೋಡಿದರೆ ಇನ್ನೂ ಒಮ್ಮೆ ಬಂದು ನೋಡಿರಿ ಎಂದು ಕರೆಯುತ್ತದೆ ಆ ಸೌಂದರ್ಯ.

ಲಕ್ಕುಂಡಿಗೆ ಅವಶ್ಯವಾಗಿ ಹೋಗಿ ಬನ್ನಿರಿ, ಕಲೆಯ ಸಂಪರ್ಕದಿಂದ ಹೊಮ್ಮಿ ಹರಿಯುವ ಕೌತುಕ ಜಲದಲ್ಲಿ ಕಣ್ಣ ಪಾಪವನ್ನು ತೊಳೆಯ ಬೇಕೆನ್ನುವವರಿಗೆ ಅದೂ ಒಂದು ಸ್ಥಳ. ಗದಗನ್ನು ನೀವು ಬಲ್ಲಿರಷ್ಟೇ ? ಅಲ್ಲಿಂದ ಲಕ್ಕುಂಡಿ ಏಳೇ ಏಳು ಮೈಲು. ವಾಹನ ಸೌಕರ್ಯ ದೊರೆಯು ತ್ತದೆ ಗದಗಿನಲ್ಲಿ-ನಿಮ್ಮನ್ನು ಲಕ್ಕುಂಡಿಗೆ ಕೊಂಡೊಯ್ಯಲು. ಟ್ಯಾಕ್ಸಿ

ಮಾಡಿಕೊಂಡು ಹೋದರಂತೂ ಹಾ ಎನ್ನುವುದರೊಳಗಾಗಿ ಮುಟ್ಟುತ್ತೀರಿ. ಸರಿಯಾದ ಋತುವಿನಲ್ಲಿ ಹೊರಟರೆ ಬಯಲು ಸೀಮೆಯ ಹಸಿರು ಪೈರೋ ಹಳದಿಯ ಪೈರೋ ದಾರಿಯುದ್ದಕ್ಕೂ ನಿಮಗೆ ತನ್ನ ಸೊಬಗಿನ ಕತೆ ಹೇಳುತ್ತದೆ.

ಗದಗಿನ ನಿಲ್ದಾಣದಲ್ಲಿ ರೈಲಿಳಿದು ಲಕ್ಕುಂಡಿಯ ಬಗೆಗೆ ವಿಚಾರಿಸಿದರೆ ನೂರೊಂದು ಗುಡಿಗಳ ಹಾಗೂ ನೂರೊಂದು ಬಾವಿಗಳ ವಿವರಣೆ ನಿಮ್ಮ ಕುತೂಹಲವನ್ನು ಕೆರಳಿಸದಿರದು; ೧೦೧ ಗುಡಿಗಳೆಲ್ಲಾ ಇರಬಹುದು; ಹತ್ತಾರು ಕಡಿಮೆ ಇರಬಹುದು. ಅದೇನು ದೊಡ್ಡ ಮಾತಲ್ಲ. ನಾನು ಚಿಕ್ಕವನಿದ್ದಾಗ " ಇಪ್ಪತ್ತೇಳು ನಕ್ಷತ್ರಗಳಲ್ಲಿ ಹತ್ತು ಹೋದರೆ ಎಷ್ಟು ಉಳಿಯುವವು ?'' ಎಂದು ಹಿರಿಯರು ಪ್ರಶ್ನೆ ಹಾಕುತ್ತಿದ್ದುದು ನನಗೆ ನೆನಪಿದೆ. " ಹದಿನೇಳು '' ಎಂದು ಉತ್ತರಿಸಿದರೆ ಅವರು ನಕ್ಕು " ಏನೂ ಉಳಿಯುವುದಿಲ್ಲ " ಎಂದು ಹೇಳುತ್ತಿದ್ದರು. ೨೭ ಮಳೆಗಳಲ್ಲಿ ೧೦ ಮಾತ್ರ ಮುಖ್ಯವಂತೆ. ಹುಲುಸಾದ ಬೆಳೆ ಬರಬೇಕು ಅವುಗಳಿಂದಲೇ. ಹಾಗೆಯೇ ಲಕ್ಕುಂಡಿಯ ೧೦೧ ಗುಡಿಗಳಲ್ಲಿ ಎಂಟೋ ಹತ್ತೋ ಮುಖ್ಯ. ಅಷ್ಟನ್ನೇ ಸೂಕ್ಷ್ಮವಾಗಿ ನೋಡಿದರೆ ಸಾಕು.

ಲಕ್ಕುಂಡಿಯ ವಾಸ್ತು ಶಿಲ್ಪ ಚಾಲುಕ್ಯ ಮಾರ್ಗಕ್ಕೆ ತೀರ ಸಮೀಪವೆಂದು ಹೇಳಬಹುದು. ಐಹೊಳೆ ಪಟ್ಟದಕಲ್ಲುಗಳ ಗುಡಿಗಳು ಚಾಲುಕ್ಯ ಮಾರ್ಗದ ಗುಡಿಗಳೆಂದು ಬೇರೆ ಹೇಳಬೇಕಿಲ್ಲ. ಚಾಲುಕ್ಯ ವಾಸ್ತು ಶಿಲ್ಪವೇ ಮುಂದೆ ಹೊಯ್ಸಳ ವಾಸ್ತು ಶಿಲ್ಪಕ್ಕೆ ದಾರಿ ಮಾಡಿರಬಹುದು. ಚಾಲುಕ್ಯ ಮಾರ್ಗವು ಹೊಯ್ಸಳ ಮಾರ್ಗಕ್ಕೆ ತಿರುಗುತ್ತಿರುವ ಸಂಧಿ ಕಾಲದಲ್ಲಿ ಲಕ್ಕುಂಡಿಯ ಗುಡಿಗಳು ರೂಪಗೊಂಡಿರಬಹುದೇ ? ವಾಸ್ತುಶಿಲ್ಪದ ಸ್ಥೂಲ ನಿರೀಕ್ಷಣೆ ಹೊಳೆಯುವ ಸೂಚನೆ ಇದು. ಈ ಸಂದರ್ಭದಲ್ಲಿ ಹೆಚ್ಚಿನ ಬೆಳಕನ್ನು ಚೆಲ್ಲಬಲ್ಲವರು ಇತಿಹಾಸಜ್ಞರು.

ಅದು ಹೇಗೆಯೇ ಇರಲಿ, ಎರಡೂ ಮಾರ್ಗಗಳಿಗೆ ಸಮೀಪವಾದ ಕೆಲವೊಂದು ಅಂಶಗಳು ಈ ಗುಡಿಗಳಲ್ಲಿ ಕಾಣುತ್ತವೆ; ಉದಾಹರಣೆಗಾಗಿ ಕಂಬಗಳೂ ಚೌಕಟ್ಟುಗಳೂ ಚಾಲುಕ್ಯ ಮಾರ್ಗವನ್ನು ನೆನಪಿಗೆ ತರುತ್ತವೆ. ಗಜಲಕ್ಷ್ಮಿಯ ಸ್ಪಷ್ಟವಾದ ಗುರುತಂತೂ ಈ ಗುಡಿಗಳಲ್ಲಿ ಇದ್ದೇ ಇದೆ.

ಹೊಯ್ಸಳ ರೀತಿಯ ಗುಡಿಯ ಅಡಿ ಯೋಜನೆಯನ್ನು ಇಲ್ಲಿ ಕಾಣಬಹುದು. ಗುಡಿಯನ್ನೇ ಹೊತ್ತಿಹವು ಎಂಬಂತೆ ಗುಡಿಯ ಅಡಿಯಲ್ಲಿ ಸುತ್ತಲೂ ಕೆತ್ತಿದ ಆನೆಗಳ ಸಾಲು ಹೊಯ್ಸಳ ರೀತಿಗೆ ಸಾಕ್ಷಿಯಾಗಿವೆ.

ಮೇಲೆ ಕಾಣಿಸಿದ ಎರಡೂ ಮಾರ್ಗಗಳಲ್ಲಿ ಸ್ಫುಟವಾಗಿ ತೋರಿ ಬಾರದ ಕೆಲವು ವಿಶಿಷ್ಟ ಅಂಶಗಳನ್ನೂ ಲಕ್ಕುಂಡಿಯ ಗುಡಿಗಳಲ್ಲಿ ಗುರುತಿಸ ಬಹುದು. ಜಿನುಗು ಜಿನುಗಾದ ಕೆತ್ತನೆಯ ಕೆಲಸ ಅವುಗಳಲ್ಲಿ ಒಂದು. ಇಲ್ಲಿಯ ಕೆತ್ತನೆಯ ಕೆಲಸ ಬಹಳ ನಾಜೂಕಾಗಿದೆ. ಕಾಗದವನ್ನು ಕತ್ತರಿಸಿ ಮಾಡಿದ ಜಾಲುರುಗಳಂತೆ ಕಾಣುತ್ತದೆ. ಈ ಗುಡಿಗಳ ಚೌಕಟ್ಟಿನ ಅಡಿ ಗಲ್ಲಿನಲ್ಲಿ ಕೊರೆದ ಸುಳುಹಿದ ಪರದೆಗಳು, ಕಂಬಗಳ ಕೆಳಭಾಗದಲ್ಲಿ ಬಳ್ಳಿ ದುಂಡಗೆ ಸುತ್ತಿಕೊಂಡಿದೆಯೇನೋ ಎಂಬಂತಿರುವ ಚಕ್ರಾಕಾರದ ಸುಳುಹಿ ನಲ್ಲಿ ಬಿಡಿಸಿದ ಚಿಕ್ಕ ಚಿಕ್ಕ ಶಿಲಾಮೂರ್ತಿಗಳ ಚೆಲುವೂ ಜೀವ ಕಳೆಯೂ ಭಾವತುಂಬಿ ನೋಡುವವರನ್ನು ಬೆರಗುಗೊಳಿಸದೆ ಇರವು. ಇಷ್ಟೊಂದು ಸೂಕ್ಷ್ಮ ಕೆಲಸವನ್ನು ಮಾಡಿದ ಆ ಶಿಲ್ಪಕಲಾವಿದರ ಕೈಯುಳಿಯು ಎಷ್ಟೊಂದು ಸಹಜವಾದ ಜೋಕೆ-ತೂಕಗಳಿಂದ ಆಡಿರಬೇಕು ! ಕವಿ ಬೇಂದ್ರೆ ಅವರು ತಮ್ಮದೊಂದು ಕವನದಲ್ಲಿ ಉದ್ಗಾರ ತೆಗೆದಂತೆ " ಕನ್ನಡದ ಇಂದ್ರಜಾಲಕೆ ಕಲ್ಲುಕುಸುರಿದೆ " ಇಲ್ಲಿ.

ಲಕ್ಕುಂಡಿಯ ನಾಗೇಶ್ವರ ಗುಡಿಯನ್ನೂ 'ವಿಶ್ವೇಶ್ವರ' ಗುಡಿ ಯನ್ನೂ ಈ ದೃಷ್ಟಿಯಿಂದ ನೋಡಬೇಕು. ಇಲ್ಲಿ ಬಿಡಿಸಿದ ಚಿಕ್ಕ ಚಿಕ್ಕ ಶಿಲಾಮೂರ್ತಿಗಳು ಧರಿಸಿದ ಆಭರಣಗಳಲ್ಲಿ ವೈಶಿಷ್ಟ್ಯವುಂಟಲ್ಲದೆ ಸಂಪೂರ್ಣ ತೆಯೂ ಉಂಟು. ಲಕ್ಕುಂಡಿಯ 'ಜಿನಬಸ್ತಿ' ಯಲ್ಲಿರುವ ಚತುರ್ಮುಖ ಬ್ರಹ್ಮನನ್ನು ಎವೆಯಿಕ್ಕದೆ ನೋಡಿದರೆ ಆ ಕಾಲದ ಶಿಲ್ಪಕಲಾ ನೈಪುಣ್ಯದ ಕಲ್ಪನೆಯಾದೀತು. ಆ ಪ್ರತಿಮೆಯ ನಾಲ್ಕೂ ಮುಖಗಳಲ್ಲಿ ಇಂತೆಂದು ಬಿಡಿಸಿ ಹೇಳಲಾಗದ ಒಂದು ಭಾವ ಪ್ರತಿಬಿಂಬಿತವಾಗಿದೆ. ಶಿಲೆಯೇ ಭಾವಕ್ಕೆ ಪಕ್ಕಾದಂತಿದೆ. ಬ್ರಹ್ಮನನ್ನೇ ನಿರ್ಮಿಸಿದ ಆ ಶಿಲ್ಪಕಲಾಕೋವಿ ದನು ತಾನು ನಿರ್ಮಿಸಿದ ಆ ಶಿಲಾಮೂರ್ತಿಗೆ ತೊಡಿಸಿದ ಅಲಂಕಾರ ಸಂಪ ತ್ತನ್ನಂತೂ ಉಪಮಿಸಲಾಗದು. ಆ ಮೂರ್ತಿಗಿಟ್ಟ ಕಿರೀಟವೋ ಮೂರ್ತಿ ಶಿಲ್ಪಕ್ಕೆ ಕಿರೀಟವಿಟ್ಟಂತಿದೆ. ಲಕ್ಕುಂಡಿಯ ಗುಡಿಗಳಲ್ಲಿ ಇನ್ನೊಂದು ವೈಶಿಷ್ಟ್ಯ

ವನ್ನು ತಟ್ಟನೆ ಕಂಡು ಹಿಡಿಯಬಹುದು. ಒಂದೇ ರೀತಿಯ ಸುಳುಹು ಹಾಗು ಮೂರ್ತಿಗಳಿಂದ ಅಂದವಡೆದ ಆರೇಳು ಹಂತಗಳು ಒಂದರ ಮೇಲೊಂದು ಕಿರಿಕಿರಿ ಅಗಲವಾಗುತ್ತ ಏರಿ, ಶಿಲೆಯು ಕಮಲವಾಗಿ ಅರಳಿ, ಅರಳಿದ ಕಮಲದಲ್ಲಿ ಚೆಲುವಿನಿಂದ ತುಂಬಿಹುದೇನೋ ಎನ್ನುವಂತೆ ಕಾಣುವ ಸುಂದರ ಕುಂಭದಾಕಾರದ ಕಳಸದಲ್ಲಿ ಕೊನೆಗೊಳ್ಳುವ ಇಲ್ಲಿಯ ಗುಡಿಗಳ ಮುಡಿಯಲ್ಲಿಯೇ ಒಂದು ವೈಶಿಷ್ಟ್ಯ ಎದ್ದು ಕಾಣುತ್ತದೆ; ನಾಗೇಶ್ವರ ಗುಡಿಯನ್ನು ಈ ಸಂದರ್ಭದಲ್ಲಿ ಉದಾಹರಿಸಬಹುದು. ಶಿಖರದ ಈ ಸೌಂದರ್ಯವು ಚಾಲುಕ್ಯಮಾರ್ಗವನ್ನನುಸರಿಸಿದ ಇನ್ನಾವುದೇ ಸ್ಥಳದ ಗುಡಿಗಳಲ್ಲಿ ಬಹುಶಃ ಕಂಡು ಬರಲಾರದು. ಹೊಯ್ಸಳ ಮಾರ್ಗದ ಗುಡಿಗಳಂತೂ ಹೇಳಿ ಕೇಳಿ ಬೋಳು ಮಾಳಿಗೆಯ ಗುಡಿಗಳು.

ಹೇಳಬೇಕೆಂದಿದ್ದ ಒಂದು ಮುಖ್ಯ ಮಾತನ್ನೇ ಕೊನೆಯವರೆಗೆ ಮರೆತೆ. ಲಕ್ಕುಂಡಿಗೆ ಹೋಗಲಿಚ್ಛಿಸುವವರು ಅವಸರದಲ್ಲಿ ಹೋಗಿ ಬಂದರೆ ಪ್ರಯೋಜನವಿಲ್ಲ. ಸೂಕ್ಷ್ಮ ಕೆತ್ತನೆಯ ಕೆಲಸದ ಸೂಕ್ಷ್ಮ ನಿರೀಕ್ಷಣೆಗೆ ಎಷ್ಟು ಬಿಡುವು ಮಾಡಿಕೊಂಡು ಹೋದರೆ ಅಷ್ಟು ಒಳಿತು. ಸರಿ; ಗುಡಿಗಳನ್ನು ಸುತ್ತಿ ಸುತ್ತಿ ಬೇಸತ್ತರೆ ಆ ಊರ ಮುಂದಿನ ಮಸ್ಕಿನ ಬಾವಿಯ ತೋಟಕ್ಕೆ ಹೋಗಬಹುದು; ಉಸುಕಿನ ಬಾವಿಯೆಂದೂ ಅದನ್ನು ಕರೆಯುವರು; ಕಾರಣವೇನೋ ತಿಳಿಯದು. ಅಲ್ಲಿಯೂ ಒಂದು ಗುಡಿಯಿದೆ. ಬಾವಿಯಂತೂ ನೋಡುವಂತಹದು. ವಾಸ್ತುಶಿಲ್ಪದ ಸಂಪರ್ಕ ಸಂಸ್ಕಾರಗಳು ಬಿತ್ತರವಾದ ಆ ಬಾವಿಗೂ ಒದಗಿವೆ. ಬಾವಿಯನ್ನು ಬಳಸಿ ಬಾಳೆ ಹಾಗು ಪೇರಲ ಬನಗಳಿವೆ. ಮೂಗೂರು ಮಲ್ಲಪ್ಪ ಎಂಬವರು ಜೋಗದ ಜಲಪಾತವನ್ನು ಕುರಿತು ಒಂದು ಲಾವಣ್ಯಮಯವಾದ ಲಾವಣಿಯನ್ನು ಬರೆದಿದ್ದಾರೆ. " ಬುತ್ತಿ ತಂದಿದ್ರುಣ್ಣಿ ಇಲ್ಲಿ ತಂಪಾಗಿದೆ." ಎಂಬುದು ಆ ಲಾವಣಿಯ ಚರಣಗಳಲ್ಲಿ ಒಂದು. ಲಕ್ಕುಂಡಿಯ ಆ ತೋಟದ ತಂಪಿನಲ್ಲಿ ನಮ್ಮ ಮನವು ತೇಲಿದಾಗ " ಬುತ್ತಿ ತಂದಿದ್ರುಣ್ಣಿ ಇಲ್ಲಿ ತಂಪಾಗಿದೆ " ಎಂಬ ಮಾತು ನೆನಪಾಗುತ್ತದೆ.

— — — —

# ಕ್ಷೇತ್ರಗಳಲ್ಲಿ ಕಲೆಯ ಆರಾಧನೆ

## ಕ್ಷೇತ್ರಗಳ ಕಲ್ಪನೆ:

ಜನಕ್ಕೆ ಕ್ಷೇತ್ರಗಳ ಕಲ್ಪನೆಯಾಗಲಿಕ್ಕೆ ಎರಡು ಮೂರು ನಿಚ್ಚಳ ವಾದ ಕಾರಣಗಳುಂಟು. ಮೊದಲನೆಯದಾಗಿ ಮಾನವನಲ್ಲಿರುವ ಆರಾಧನಾ ಪ್ರವೃತ್ತಿಯು ಅವನ ಮನವನ್ನು ಪುಣ್ಯ ಕ್ಷೇತ್ರದ ಕಲ್ಪನೆಯತ್ತ ಸೆಳೆಯು ತ್ತದೆ. ಸಾಮಾನ್ಯವಾಗಿ ಸುವಿಶಾಲವೂ ಸುರಮ್ಯವೂ ಪ್ರಶಾಂತವೂ ಆದ ಸ್ಥಳವು ಮಾನವನಲ್ಲಿ ಆರಾಧನೆಯ ಪ್ರವೃತ್ತಿಯನ್ನು ಅರಳಿಸುತ್ತದೆ. ಈ ಆರಾಧನಾ ಪ್ರವೃತ್ತಿಗೆ ಮಾನವನಲ್ಲಿ ಕೌತುಕ ಪ್ರವೃತ್ತಿಯೂ ದೈನ್ಯವೂ ಪೋಷಕವಾಗಬಹುದು; ಪೋಷಕವಾಗುತ್ತವೆ. ಸಮುದ್ರದ ಅದ್ಭುತ ವೈಭವ ವನ್ನೂ ಪರ್ವತದ ಔನ್ನತ್ಯವನ್ನೂ, ಎರಡು ಹಿರಿಯ ಹೊಳೆಗಳು ಹರಿದು ಬಂದು ಸೇರಿದ ಸುವಿಶಾಲವಾದ ಸಂಗಮದೆಡೆಯ ವಿಸ್ತಾರವನ್ನು ಕಂಡಾಗ ಮಾನವನು ಕೌತುಕ ಪಡುವುದರ ಜೊತೆಗೆ ಅವುಗಳೆದುರಿನಲ್ಲಿ ತನ್ನ ಕಿರಿತನ ವನ್ನು ನೆನೆದು ದೀನ ಭಾವವನ್ನು ತಾಳಬಹುದು. ಹೀಗೆ ಒಂದು ಉನ್ನತ ವಾದ, ವಿಶಾಲವಾದ, ಪ್ರಶಾಂತವಾದ, ಪ್ರಕೃತಿ ರಮಣೀಯವಾದ ಸ್ಥಳದಲ್ಲಿ ಭಕ್ತಿಯು ಅವತರಿಸಿ ಆ ಸ್ಥಳಕ್ಕೆ ಒಬ್ಬ ಮಹಾನುಭಾವನ ಸಂಪರ್ಕವುಂಟಾಗಿ ಅದೊಂದು ಪುಣ್ಯ ಕ್ಷೇತ್ರವಾಗಿ ಪರಿಣಮಿಸಬಹುದು.

ಕ್ಷೇತ್ರಗಳ ಉದಯಕ್ಕೆ ಇನ್ನೊಂದು ಕಾರಣವೆಂದರೆ ಮಾನವನಲ್ಲಿ ಸಾಮಾನ್ಯವಾಗಿ ಕೆರಳುವ ಪ್ರವಾಸಪ್ರವೃತ್ತಿ. ಇದನ್ನೇ ಇಂಗ್ಲಿಷಿನಲ್ಲಿ 'wander-thirst' ಎಂದು ಹೇಳುತ್ತಾರೆ. ಒಂದೇ ಸ್ಥಳದ ಅತಿ ಪರಿ ಚಯದಿಂದ ಬೇಸರವುಂಟಾಗಿ ಅದನ್ನು ಪರಿಹರಿಸಿಕೊಳ್ಳಲು ಅವನು ಸಂಚಾರ ಹೊರಡಲು ಬಯಸುತ್ತಾನೆ. ನಿತ್ಯದ ಜಂಜಡದಿಂದ ಕೆಲವು ಹೊತ್ತಾ ದರೂ ಬಿಡುಗಡೆ ಹೊಂದಲು ಒಂದು ಪ್ರಶಾಂತ ಸ್ಥಳವನ್ನು ಆರಿಸುತ್ತಾನೆ.

ತನ್ನ ಸಮೀಪವಿರುವ ಅಥವಾ ತನಗೆ ಅನುಕೂಲವಾಗುವ ಇಂಥ ಒಂದು ಸ್ಥಳವನ್ನು ಆರಿಸಿ ಅದಕ್ಕೆ ತನ್ನ ಭಾವನೆಯ ಪಾವನತೆಯನ್ನು ಅಂಟಿಸಿ ಅದನ್ನೊಂದು ಪುಣ್ಯ ಕ್ಷೇತ್ರವನ್ನಾಗಿ ಮಾಡಲು ಕಾರಣನಾಗುತ್ತಾನೆ. ಈ ರೀತಿಯಾಗಿಯೂ ಪುಣ್ಯ ಕ್ಷೇತ್ರಗಳು ಬೆಳೆದು ಬಂದುದುಂಟು. ಹೊರಗಿನ ಅದ್ಭುತಕ್ಕೆ ಅಥವಾ ಸೌಂದರ್ಯಕ್ಕೆ ಅಥವಾ ಪ್ರಶಾಂತತೆಗೆ ಮಾನವನ ಚಿತ್ತವು ಪದೇ ಪದೇ ಸುಖದ ಹಾಗು ಶಾಂತಿಯ ಉತ್ತರವನ್ನುಕೊಟ್ಟುದರ ಪರಿಣಾಮವಾಗಿ ಕ್ಷೇತ್ರಗಳುಂಟಾಗುತ್ತವೆ.

## ಕ್ಷೇತ್ರಕ್ಕೆ ಹಿಂದಿನಕಾಲ ಅನುಕೂಲ:

ಪುಣ್ಯ ಕ್ಷೇತ್ರಗಳು ಬೆಳೆಯುವುದಕ್ಕೂ ಅವುಗಳಿಗಾಗಿ ಜನ ಯಾತ್ರೆ ಹೊರಡುವುದಕ್ಕೂ ಇಂದಿನ ಪರಿಸ್ಥಿತಿಗಿಂತ ಹಿಂದಿನ ಪರಿಸ್ಥಿತಿ ಹೆಚ್ಚು ಅನುಕೂಲವಾಗಿದ್ದಿತು. ಮೊದಲನೆಯದಾಗಿ ಹಿಂದಿನವರ ಜೀವನವು ನಿಧಾನವಾಗಿ ಸಾಗುತ್ತಿದ್ದಿತು; ಇಂದಿನ ಜಗತ್ತನ್ನು ಆವರಿಸಿದ ಅನಾವಶ್ಯಕವಾದ ಗಡಿಬಿಡಿ ಗದ್ದಲಗಳೂ ಅತಿವೇಗವೂ ಆಗ ಇರಲಿಲ್ಲ. ಆಗ ಜನರು ಮನೆ ಬಿಟ್ಟು ಹೊರಟರೆ ತಾತ್ಪೂರ್ತಿಕವಾಗಿ ಮನೆಯ ಹವ್ಯಾಸವನ್ನು ಬಿಟ್ಟು ಹೊರಡುತ್ತಿದ್ದರು. ಏಕೆಂದರೆ ಒಂದು ಮನೆಯ ಜನರೆಲ್ಲ ಒಟ್ಟಾಗಿಯೇ ಪ್ರಯಾಣ ಕೈಕೊಳ್ಳುತ್ತಿದ್ದರು. ಚಕ್ಕಡಿಯ ಎತ್ತುಗಳ ಹುರಿಗೆಜ್ಜೆಯ ದನಿಗೆ ಪ್ರಯಾಣವು ನಿಧಾನವಾಗಿಯೂ ಸುಖವಾಗಿಯೂ ಸುಖವಾಗಿಯೂ ಸಾಗುತ್ತಿದ್ದಿತು. ದಾರಿಯಲ್ಲಿ ಅಲ್ಲಲ್ಲಿ ನೀರು ನೆಳಲಿದ್ದಲ್ಲಿ ಮಜಲು ಮಾಡಿ ಪ್ರವಾಸ ಮುಂದೆ ಸಾಗುತ್ತಿದ್ದಿತು; ಆ ಮಜಲಿನಲ್ಲಿಯೇ ಒಂದು ಸ್ವಾರಸ್ಯವಿರುತ್ತಿದ್ದಿತು. ಯಾತ್ರಾಸ್ಥಳವನ್ನು ಮುಟ್ಟಿದಾಗಲೂ ಅದೇ ಮನಃಶಾಂತಿ ಉಳಿಯುತ್ತಿದ್ದಿತು. ಏಕೆಂದರೆ ಈಗಿನಂತೆ ಯಾತ್ರಾಸ್ಥಳಗಳಲ್ಲಿ ಅತೀವ ಜನದಟ್ಟಣೆಯಿಂದ ಮನಸ್ಸಿನ ಶಾಂತಿ ಭಂಗವಾಗುತ್ತಿರಲಿಲ್ಲ.

## ನಮ್ಮ ನಾಡೂ ಕ್ಷೇತ್ರಯಾತ್ರೆಯೂ:

ನಮ್ಮ ದೇಶದ ವಾತಾವರಣ ಹಾಗು ನಮ್ಮ ಜನರ ಮನಃಪ್ರವೃತ್ತಿ ಇವು ಕ್ಷೇತ್ರಗಳ ಉದ್ಭವಕ್ಕೆ ಹಾಗು ಕ್ಷೇತ್ರಯಾತ್ರೆಗೆ ವಿಶೇಷವಾಗಿ ಅನುಕೂಲ

ವಾದವುಗಳು. ಕನ್ನಡ ನಾಡಿನ ವಿಷಯದಲ್ಲಂತೂ ಈ ಮಾತು ಇನ್ನೂ ಹೆಚ್ಚಾಗಿ ಅನ್ವಯಿಸುತ್ತದೆ. ಎರಡನೆಯದಾಗಿ ನಮ್ಮ ನಾಡು ಚೆಲುವಿನ ಬೀಡು. ಏಕೆಂದರೆ ತೀರ-ಪ್ರದೇಶದ ಅಪಾರವಾದ ಸೌಂದರ್ಯ, ಮಲೆ ನಾಡಿನಲ್ಲಿ ಚೆಲ್ಲುವರಿಯುವ ಚೆಲುವು, ಬಯಲು ನಾಡಿನಲ್ಲಿ ಹರಿಯುವ ಹೊಳೆಗಳೂ ಹಾಗು ಹೊಳೆಯುವ ಬೆಳಗಳ ಅಂದಚೆಂದಗಳು—ಇವೆಲ್ಲ ನಮ್ಮ ಕನ್ನಡ ನಾಡಿನ ಮನೋಹರತೆಗೆ ಸಾಕ್ಷಿಯಾಗಿವೆ: ರಮ್ಯವಾದ ಗಿರಿಕಂದರಗಳು, ಮನೋಹರವಾದ ಬನಸಿರಿ, ಅದ್ಭುತ ರಮಣೀಯವಾದ ಜಲಪಾತಗಳು—ಇವೆಲ್ಲ ನಮ್ಮ ನಾಡಿನಲ್ಲಿವೆ; ಅವುಗಳ ಸೌಂದರ್ಯದ ಕರೆಗೆ ಓಗೊಡಬಲ್ಲ ರಸಿಕರನ್ನೆಲ್ಲ ಅವು ಕೈಬೀಸಿ ಕರೆಯುತ್ತಿವೆ.

## ಚೆಲುವಿನ ಕರೆಗೆ ರಸಿಕತೆಯ ಉತ್ತರ:

ಪ್ರಕೃತಿಯು ಹೀಗೆ ವಿವಿಧ ಸುಂದರ ರೂಪಗಳನ್ನು ಧರಿಸಿ ಮೆರೆಯುತ್ತಿರುವ ಎಲ್ಲ ಎಡೆಗಳಲ್ಲಿ ಸೌಂದರ್ಯದ ಉಪಾಸಕರಾದ ನಮ್ಮ ಪೂರ್ವಜರು ಪುಣ್ಯಕ್ಷೇತ್ರಗಳನ್ನು ಕಲ್ಪಿಸಿಕೊಂಡಿದ್ದಾರೆ. ಜಲಶ್ರೀ ವನಶ್ರೀಗಳಿಂದೊಡಗೂಡಿದ ಕ್ಷೇತ್ರದ ಸಂದರ್ಶನದಿಂದ ಭಾವಶ್ರೀ ವಿಕಾಸಗೊಂಡರೆ ಅದು ಸ್ವಾಭಾವಿಕವೇ ಸರಿ. ಆದುದರಿಂದಲೇ ಸೌಂದರ್ಯದ ಆರಾಧನೆಗಾಗಿ, ಶಾಂತಿಯ ಸಿದ್ಧಿಗಾಗಿ, ಪರಮಾತ್ಮ ಭಾವನೆಯ ಆವಿಷ್ಕಾರಕ್ಕಾಗಿ ರಸಿಕರಾದ ಕನ್ನಡಿಗರು ಸುಂದರವಾದ ಹಾಗು ಪ್ರಶಾಂತ ರಮ್ಯವಾದ ಸ್ಥಳಗಳನ್ನು ಕ್ಷೇತ್ರಗಳನ್ನಾಗಿ ಏರ್ಪಡಿಸಿಕೊಂಡರು. ಸೌಂದರ್ಯವನ್ನು ಕಂಡು ಆರಾಧಿಸಿದರಲ್ಲದೆ ಉಂಡ ಸೌಂದರ್ಯವನ್ನು ಕಲೆಯಲ್ಲಿ ಕನ್ನಡಿಸಿದರು ಕೂಡ. ಆದುದರಿಂದಲೇ ದೇವಮಂದಿರಗಳನ್ನು ನಿರ್ಮಿಸುವ ನೆಪದಲ್ಲಿ ವಾಸ್ತುಶಿಲ್ಪ ಕಲಾರಾಧನೆಯನ್ನು ಕನ್ನಡಿಗರು ಮಾಡಿದ್ದಾರೆ. ಸೌಂದರ್ಯೋಪಾಸನೆಯ ದಾರಿಯಲ್ಲಿ ಗೋಕರ್ಣ, ಕೂಡಲಸಂಗಮ, ಬನಶಂಕರಿ ಮೊದಲಾದ ಕ್ಷೇತ್ರಗಳು ಮೈದಾಳಿದರೆ ವಾಸ್ತುಶಿಲ್ಪ ಕಲಾರಾಧನೆಯ ದಾರಿಯಲ್ಲಿ, ಪಟ್ಟದಕಲ್ಲು, ಬಾದಾಮಿ, ಶ್ರವಣಬೆಳ್ಗೊಳ, ಬೇಲೂರು, ಹಳೇಬೀಡು–ಇವು ಕ್ಷೇತ್ರಗಳಾಗಿ ಪರಿಣಮಿಸಿದವು.

## ಪ್ರಕೃತಿಸೌಂದರ್ಯ ಕ್ಷೇತ್ರಗಳು:

ಮಾನವನ ಚಿತ್ತವನ್ನು ಆಕರ್ಷಿಸಿ ವಿಕಾಸಗೊಳಿಸುವ ಯಾವುದೋ ಒಂದು ಅದ್ಭುತ ಶಕ್ತಿ ಪ್ರಕೃತಿ ಸೌಂದರ್ಯದಲ್ಲಿ ಇರಲು ಸಾಕು; ಅದು ಮಾನವನ ಅಂತರಂಗಕ್ಕೆ ದೀಕ್ಷೆಯನ್ನು ನೀಡುತ್ತ ಬಂದಿದೆ; ಅದಕ್ಕಾಗಿಯೇ ಜಲಸೌಕರ್ಯದಿಂದ ಕೂಡಿದ ರಮ್ಯಪ್ರಕೃತಿಯ ಸನ್ನಿವೇಶದಲ್ಲಿ ಕ್ಷೇತ್ರಗಳು ಮೂಡಿ ಬಂದಿವೆ. ಅಂಥ ಸನ್ನಿವೇಶದ ಇಂಥ ಭಾವತೀರ್ಥದ ಸಂಪರ್ಕದಿಂದ ಮನಸ್ಸು ಯಾವುದೋ ಒಂದು ದಿವ್ಯದತ್ತ ತಿರುಗುತ್ತದೆ. ನಮ್ಮ ನಾಡಿನ ಪಶ್ಚಿಮ ತೀರದಲ್ಲಿರುವ ಗೋಕರ್ಣವು ಇಂತಹ ಒಂದು ಪ್ರಕೃತಿ ರಮ್ಯಕ್ಷೇತ್ರ; ರಾಮಾಯಣ ಕಾಲದಿಂದಲೂ ನಮ್ಮ ಪಶ್ಚಿಮ ತೀರವನ್ನು ಕಾಪಾಡುತ್ತಿರುವಂತೆ ಭಾಸವಾಗುವ ಮಹಾಬಳೇಶ್ವರನು ರಮ್ಯ ಪ್ರಕೃತಿಯ ಸಂದರ್ಶನದಿಂದ ಮಾನವನು ತಾಳುವ ಭಕ್ತಿಯ ಪ್ರತೀಕ. ಆ ಅಪಾರ ಸಮುದ್ರ; ಆ ವಿಶಾಲವಾದ ತಣ್ಣನೆಯ-ನುಣ್ಣನೆಯ ಮಳಲುದಂಡೆ; ಮಹಾಬಳೇಶ್ವರನಿಗಾಗಿ ಚಾಮರ ಬೀಸುವಂತಿರುವ ಆ ತೆಂಗಿನ ಗಿಡಗಳು- ಇವೆಲ್ಲವೂ ಮಹಾಬಳೇಶ್ವರನ ಅವತಾರಕ್ಕೆ ಕಾರಣವಾಗಿರಲು ಸಾಕು. ಮಹಾಬಳೇಶ್ವರನು ಗುಡಿಯ ಹೊರಗಣ ಸೌಂದರ್ಯದಲ್ಲಿದ್ದಾನೆಯೇ ಹೊರತು ಗುಡಿಯಲಿಲ್ಲ. ಇದೇ ರೀತಿಯಾಗಿ ಬಯಲು ನಾಡಿನ ಬನಶಂಕರಿಯ ಕ್ಷೇತ್ರದಲ್ಲಿ ಚಾಲುಕ್ಯರ ನಾಡದೇವಿ ಅವತರಿಸಿ ಸರಸ್ವತೀ ಹಳ್ಳದ ನೀರನ್ನುಂಡು ಬೆಳೆಯುವ ಕೌಂಗು, ತೆಂಗು, ಎಲೆಬಳ್ಳಿ, ಬಾಳೆ ಗಿಡಗಳಿಂದ ಅಂದವಡೆದ ಬನದಲ್ಲಿ ಬಿನದಗೈಯುವಂತಿದ್ದಾಳೆ.

ಸಹ್ಯಾದ್ರಿಯಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಜನ್ಮ ತಾಳಿ ಬಂದರೂ ಬೆಳುವೊಲದಲ್ಲಿ ಒಂದಾಗಿ ಕೂಡಿದ ಕೃಷ್ಣೆ ಮಲಪ್ರಭೆಯರ ಸುಮನೋಹರ ಸು ವಿಶಾಲ ಸುಪ್ರಶಾಂತ ಸಂಗಮದಲ್ಲಿ ಕೂಡಲ ಸಂಗಮೇಶ್ವರನು ಎಂದಿನಿಂದಲೋ ಬಸವಣ್ಣನವರಂತ ಭಾವ ಜೀವಿಗಳನ್ನು ಮೌನ ಧ್ಯಾನಕ್ಕಾಗಿ ಶೂನ್ಯದ ಆರಾಧನೆಗಾಗಿ ಕೈಬೀಸಿ ಕರೆಯುತ್ತಲಿದ್ದಾನೆ.

ಮಲೆನಾಡಿನಂಚಿನ ಮಧುರ ಸನ್ನಿವೇಶದಲ್ಲಿ ನೆಲಸಿದ ಉಡುಪಿಯಲ್ಲಿ ರಸಿಕ ಶ್ರೇಷ್ಠನಾದ ಶ್ರೀಕೃಷ್ಣನು ತನ್ನ ನಿವಾಸವನ್ನು ಮಾಡಿಕೊಂಡಿದ್ದಾನೆ. ಇದರಂತೆಯೇ ಈ ಬಗೆಯ ಉಳಿದ ಕ್ಷೇತ್ರಗಳು ಉಂಟಾಗಿರಬೇಕು.

ಒಟ್ಟಿನಲ್ಲಿ ಅಂತರಾತ್ಮನಲ್ಲಿ ಪರಮಾತ್ಮನು ಅವತರಿಸುವುದು ಹೀಗೆಯೇ ಎಂದು ಕಾಣುತ್ತದೆ. ತಿಳಿಯಾದ ಜಲದಲ್ಲಿ ಸುತ್ತಲಿನ ಸೌಂದರ್ಯಗಳು ಪ್ರತಿಬಿಂಬಿತವಾಗುವಂತೆ ಭಾವತೀರ್ಥದ ಜಲದಲ್ಲಿ ಪರಮಾತ್ಮನು ಪ್ರತಿಬಿಂಬಿತನಾಗಬಹುದು.

## ಮಹಾನುಭಾವರ ಸಂಪರ್ಕ ಪಡೆದ ಕ್ಷೇತ್ರಗಳು:

ನಮ್ಮ ನಾಡಿನ ಮಹಾ ವ್ಯಕ್ತಿಗಳ ಸಂಪರ್ಕ ಪಡೆದು ಹೆಸರಾಂತ ಕೆಲವು ಪುಣ್ಯಕ್ಷೇತ್ರಗಳೂ ಉಂಟು. ಅವುಗಳಲ್ಲಿ ಬನವಾಸಿ, ಶೃಂಗೇರಿ, ಕಲ್ಯಾಣ ಮೊದಲಾದವುಗಳನ್ನು ಇಲ್ಲಿ ಉದಾಹರಿಸಬಹುದು. ಬನವಾಸಿಯು ಸೊಗಸಾಗಿ ಹರಿಯುವ ವರದಾ ನದಿಯ ಮಡಿಲಲ್ಲಿ ಒರಗಿದ ಸೌಂದರ್ಯಕ್ಷೇತ್ರವಾಗಿರುವುದರ ಜೊತೆಗೆ ಮಧುಕೇಶ್ವರನ ನಿಮಿತ್ತದಿಂದ ಪುಣ್ಯಕ್ಷೇತ್ರವೂ ಆಗಿದೆ. ಅಲ್ಲದೆ ಪಂಪ, ಪ್ರಭುದೇವರೇ ಮೊದಲಾದ ಮಹಾನುಭಾವರ ಸಂಪರ್ಕದಿಂದಾಗಿ ಸ್ಫೂರ್ತಿಕ್ಷೇತ್ರವೂ ಆಗಿದೆ. ಪಂಪನಿಗೆ ಕಾವ್ಯಸ್ಫೂರ್ತಿಯನ್ನೂ ಪ್ರಭುದೇವರಿಗೆ ಆಧ್ಯಾತ್ಮ ಸ್ಫೂರ್ತಿಯನ್ನೂ ನೀಡಿದ ಸ್ಥಳವದು. ಅದರಂತೆ ತುಂಗಭದ್ರಾ ನದಿಯ ಸುಂದರ ಸನ್ನಿವೇಶದಿಂದಲೂ ಪಂಪಾಪತಿಯ ಸಾನ್ನಿಧ್ಯದಿಂದಲೂ ಹಂಪೆಯು ಹೆಸರಾಂತು ನಿಂತಿರುವುದಲ್ಲದೆ **ವಿಜಯನಗರ** ರಾಜ್ಯದ ವೈಭವದ ಸ್ಮಾರಕವಾಗಿಯೂ ಉಳಿದಿದೆ. ಅಲ್ಲದೆ ಹರಿಹರ ಮೊದಲಾದ ಮಹಾ ಕವಿಗಳಿಗೆ ಕಾವ್ಯಾವೇಶವನ್ನು ನೀಡಿದ ಶ್ರೆಯಸ್ಸೂ ಅದಕ್ಕುಂಟು.

ಅದರಂತೆ ಗದಗು ವೀರನಾರಾಯಣ ಸ್ವಾಮಿಯ ಆಡುಂಬೊಲವಾಗಿರುವುದಲ್ಲದೆ ಕುಮಾರ ವ್ಯಾಸ ಕವಿಗೆ ಕಾವ್ಯಾಸ್ಫೂರ್ತಿಯನ್ನು ಪೂರೈಸಿದ ಸ್ಥಳವಾದುದರಿಂದ ಗಣ್ಯವಾಗಿದೆ.

## ವಾಸ್ತುಶಿಲ್ಪ ಕ್ಷೇತ್ರಗಳು:

ಇನ್ನು ಕನ್ನಡ ನಾಡಿನ ವಾಸ್ತುಶಿಲ್ಪಕಲಾ ಸಂಪತ್ತನ್ನು ಬೆಳಗುವ ಕ್ಷೇತ್ರಗಳನ್ನು ಉಪಮಿಸುವುದು ಸಾಧ್ಯವಿಲ್ಲ; ಕನ್ನಡಿಗರ ಕಲಾ ವೈಶಿಷ್ಟ್ಯವನ್ನು ಅವು ಕಣ್ಣಿಗೆತ್ತಿ ತೋರುತ್ತವೆ. ನಮ್ಮ ಪೂರ್ವಜರು ಸೌಂದರ್ಯದಲ್ಲಿ ಆನಂದನಿಧಿಯಾದ ಪರಮಾತ್ಮನನ್ನು ಆರಾಧಿಸಿದರಲ್ಲದೆ ತಾವು ಕಂಡ ಸೌಂದರ್ಯವನ್ನು ಕಲೆಯಲ್ಲಿ ಕನ್ನಡಿಸಿದರು; ವಾಸ್ತುಶಿಲ್ಪ ನೈಪುಣ್ಯಪೂರ್ಣವಾದ ಮಂದಿರಗಳನ್ನು ನಿರ್ಮಿಸಿದರು. ಕನ್ನಡಿಗರ ವಾಸ್ತು-ಶಿಲ್ಪ ಹಾಗು ಮೂರ್ತಿ ಶಿಲ್ಪ ಕಲಾರಾಧನೆಯ ದಾರಿಯಲ್ಲಿ ಪಟ್ಟದಕಲ್ಲು, ಬಾದಾಮಿ, ಶ್ರವಣಬೆಳ್ಗೊಳ, ಬೇಲೂರು, ಹಳೇಬೀಡು ಇವೇ ಮೊದಲಾದ ಕ್ಷೇತ್ರಗಳು ತಲೆಯೆತ್ತಿದುವು. ಈ ಬಗೆಯ ಕ್ಷೇತ್ರಗಳಲ್ಲಿ ಕನ್ನಡಿಗರು ತಮ್ಮದೇ ಆದ ರೀತಿಯಲ್ಲಿ ಸಾಧಿಸಿದ ವಾಸ್ತು ಶಿಲ್ಪಕಲೆಯ ಚೆಲುವು ಚೆಲ್ಲವರಿದಿದೆ. ಕನ್ನಡ ನಾಡಿನ ಯಾವ ದಿಕ್ಕಿಗೆ ಹೋದರೂ ಈ ವಾಸ್ತು ಶಿಲ್ಪ ವೈಭವವು ಕಣ್ಣಿಗೆ ಎಸೆಯುವುದು. ಪಟ್ಟದಕಲ್ಲು, ಬೇಲೂರು, ಹಳೇಬೀಡು ಮುಂತಾದ ಸ್ಥಳಗಳಲ್ಲಿ ರೂಪಗೊಂಡ ದೇವಮಂದಿರಗಳಲ್ಲಿ ಉತ್ತಮ ವಾಸ್ತುಶಿಲ್ಪದೊಡನೆ ಉತ್ಕೃಷ್ಟ ಮೂರ್ತಿ ಶಿಲ್ಪವೂ ಕೂಡಿಕೊಂಡಿದೆ.

ನಮ್ಮ ಪೂರ್ವಜರ ಸೌಂದರ್ಯದೃಷ್ಟಿ ನಮಗುಂಟಾದರೆ, ಅವರ ಕಲಾಸೃಷ್ಟಿ ನಮಗೆ ಮತ್ತೆ ಸ್ಫೂರ್ತಿಯನ್ನಿತ್ತರೆ ನಮ್ಮ ಚಿತ್ತವೇ ಕ್ಷೇತ್ರವಾಗಿ, ನಮ್ಮ ಭಾವವೇ ತೀರ್ಥವಾಗಿ, ನಮ್ಮ ನಾಡೇ ನಾಡದೇವಿಯ ಮಂದಿರವಾಗಿ, ನಾಡದೇವಿಯೇ ಆ ಮಂದಿರದಲ್ಲಿ ಮುಹೂರ್ತ ಮಾಡಿದ ಮಹಾದೇವಿಯಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ.

---

# ಬಾದಾಮಿಯ ಬೆಟ್ಟ

'ವಾತಾಪಿ' ಎಂಬ ಮೂಲ ಹೆಸರು ರೂಪಾಂತರ ಹೊಂದಿ 'ಬಾದಾಮಿ'ಯಾಯಿತು ಎಂದು ಹೇಳುತ್ತಾರೆ. ಹಾಗಿದ್ದರೂ ಇರಬಹುದು. ಆದರೆ ಬಾದಾಮಿ ಊರಿನ ನೆನಪು ನನಗೆ ಬಂದಾಗ ತಿನ್ನುವ ಬಾದಾಮಿಯ ನೆನಪೂ ಜೊತೆಗೂಡಿ ಬರುತ್ತದೆ. ಬಾದಾಮಿಯ ಗುಡ್ಡದ ನಸುಗೆಂಪು ಬಣ್ಣ ಬಾದಾಮಿ ಬೀಜದ ಬಣ್ಣದಂತೆಯೇ ಇದೆ. ಬಾದಾಮಿಯ ಗಟ್ಟಿಯಾದ ಕವಚವನ್ನು ಒಡೆಯಲು ಕಷ್ಟಪಟ್ಟರೆ ಮಾತ್ರ ಅದರೊಳಗಣ ಬೀಜದ ರುಚಿ ತಿಳಿಯುವುದು. ಅದರಂತೆ ಬಾದಾಮಿ ಊರಿಗೆ ಹೋಗಿ ಅಲ್ಲಿಯ ಬೆಟ್ಟವನ್ನು ಹತ್ತಿ ಹೋಗುವ ಕಷ್ಟವನ್ನು ಪಟ್ಟಾಗ ಆ ಬೆಟ್ಟದಲ್ಲಿ ಕೊರೆದ ಕಲ್ಮನೆಗಳ ಚೆಲುವು ಹೊಳೆಯುವುದು. ಬಾದಾಮಿ ಊರಿಗೆ ಬಾದಾಮಿ ಎಂಬ ಹೆಸರು ಏಕೆ ಬಂದಿರಬಹುದೆಂಬುದು ನಿಮಗೀಗ ಹೊಳೆದಿರಬಹುದಷ್ಟೇ ?

ಬಾದಾಮಿ ವಿಜಾಪುರ ಜಿಲ್ಲೆಗೆ ಸೇರಿದ ಸ್ಥಳ; ಅದು ಕನ್ನಡ ನಾಡಿನ ಬೆಳುವಲ ಪ್ರದೇಶದ ಕೇಂದ್ರದಂತಿದೆ.

ಜೋಳದಾ ಬೋನಕ್ಕೆ ಬೇಳಿಯಾ ತೊಗೆಯಾಗಿ
ಕಾಳೆಮ್ಮೆ ಕರೆದ ಹಯನಾಗಿ ಬೆಳುವಲದ
ಮೇಳ ನೋಡೆಂದ ಸರ್ವಜ್ಞ

ಎಂದು ಸರ್ವಜ್ಞನು ಬೆಳವಲವನ್ನು ತುಂಬು ಮನದಿಂದ ಕೊಂಡಾಡಿದ್ದಾನಷ್ಟೇ! 'ಬೆಳುವಲದ ಈ ರುಚಿ ಮೇಳವನ್ನು ನೋಡಬನ್ನಿ' ಎಂದು ಕರೆಯುವಂತಿದೆ ಬಾದಾಮಿ. ಕಾಳೆಮ್ಮೆ ಕರೆದ ಹಯನಿನ ರುಚಿ ಗೊತ್ತಾಗುವುದು ಬಾದಾಮಿಯ ಕೆನೆಮೊಸರಿನ ರುಚಿನೋಡಿದಾಗ. ಬಾದಾಮಿಯ ಕೆಂಪು ಭೂಮಿಯಲ್ಲಿ ಏನೋ ಒಂದು ಕಂಪು ಬೆರತಿರಬೇಕು. ಕನ್ನಡ

ಸೀಮೆಯ ಮಣ್ಣಿನಲ್ಲಿಯೇ ಒಂದು ಸೌರಭವಿದೆ. ಬಾದಾಮಿಯ ಭೂಮಿ ಯಲ್ಲಿ ಆ ಸೌರಭದ ಸಾರವೇ ಸಂಗ್ರಹವಾಗಿರಬೇಕು. ಆದುದರಿಂದಲೇ ಅಲ್ಲಿ ಬೆಳೆಯುವ ಧಾನ್ಯದಲ್ಲಿ ಹಾಗು ಚೆನ್ನಾಗಿ ಇಳಿಯುವ ಹೈನಿನಲ್ಲಿ ಅಷ್ಟು ರುಚಿಯುಂಟಾಗಿರಬೇಕು.

ಹರ್ಷವರ್ಧನನಂತಹ ವೀರ ಚಕ್ರವರ್ತಿಯೊಡನೆ ಹೋರಾಡಿ ಅಂದು ಕನ್ನಡರ ವೀರಶ್ರೀಯನ್ನು ಮೆರೆದ ಚಾಲುಕ್ಯದೊರೆ ಎರಡನೆಯ ಪುಲಕೇಶಿಯ ಕಾಲದಲ್ಲಿ ಬಾದಾಮಿ ಹೇಗಿದ್ದಿತೋ ಯಾರು ಹೇಳಬೇಕು! ಈಗಿದ್ದ ಊರು ಅಷ್ಟಕ್ಕಷ್ಟೇ! ಈಗ ಅಲ್ಲಿರುವ ಮನೆಗಳು ಮಣ್ಣುಮೆತ್ತಿದ ಚಿಕ್ಕ ಚಿಕ್ಕ ಮನೆಗಳು ಮಾತ್ರ. ಒಟ್ಟಾಗಿ ಕನ್ನಡಿಗರ ಮನೆಗಳು ದೊಡ್ಡ ಮನೆಗಳಾಗದಿರ ಬಹುದು. ಆದರೆ "ಮನೆ ನೋಡಾ ಬಡವರು, ಘನಮನ ಸಂಪನ್ನರು" ಎಂಬ ಮಾತು ಅವರಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ. ಈ ಸಂಪದ್ಯುಕ್ತ ವಾದ ಮನವು ಭೂಮಿಯ ಗುಣದ ಫಲವೆಂದು ಕಾಣುತ್ತದೆ. ಕನ್ನಡ ಭೂಮಿಯ ಔದಾರ್ಯವು ಅದರ ಫಲವನ್ನುಂಡ ಜನದ ಮನದಲ್ಲಿಳಿದರೆ ಆಶ್ಚರ್ಯವಿಲ್ಲ. ಈ ನೆಲದ ಮಣ್ಣಿನಲ್ಲಿಯೇ ಒಂದು ಸುವಾಸನೆಯುಂಟೆಂದು ಹೇಳಿದನಲ್ಲವೇ? ನೆಲದ ಸುವಾಸನೆಯಂತೆ ಮನದ ವಾಸನೆ ಭೂಮಿ ತಾಯಿ ಕನ್ನಡಿಗರ ಅಂತಃಕರಣಕ್ಕೆ ಅನುಗ್ರಹಿಸಿದ ಪ್ರಸಾದವಿದು.

ಬೆಳವಲು ಬಿಸಿಲಿಗಾಗಿ ಹೆಸರಾಗಿದೆ; ಬಿಜಾಪುರ ಬಾದಾಮಿಗಳ ಬಿಸಿಲ ನ್ನಂತೂ ಹೇಳುವಂತಿಲ್ಲ. ಆದುದರಿಂದ ಬಾದಾಮಿಯ ಬೆಟ್ಟದ ಕಲ್ಮನೆ ಗಳನ್ನು ನೋಡಬಯಸುವವರು ತೀರ ಬೆಳಗಿನಲ್ಲಿ ಬೆಟ್ಟದ ಸೋಪಾನಗಳನ್ನು ಹತ್ತಲು ಮೊದಲು ಮಾಡಬೇಕು. ಬಾದಾಮಿಯಲ್ಲಿ ಕೆನೆಮೊಸರಿಗೆ ಕೊರತೆ ಯಿಲ್ಲ. ಅವಲಕ್ಕಿ ಕೆನೆಮೊಸರಿನಿಂದ ಹೊಟ್ಟೆಯನ್ನು ತಣ್ಣಗೆ ಮಾಡಿಕೊಂಡು ಹೊರಟರಂತೂ ಬಹಳ ನೆಟ್ಟಗೆ. ಹೊಟ್ಟೆ ತಣ್ಣಗಾಗುವುದಲ್ಲದೆ ಬೆಟ್ಟವನ್ನು ಹತ್ತಲು ಹುಮ್ಮಸವೂ ಬರುವುದು.

ಬಾದಾಮಿಯ ಬೆಟ್ಟದಲ್ಲಿ ಕೊರೆದ ಈ ಕಲ್ಮನೆಗಳು ಮೇಣಬಸದಿ ಗಳೆಂದು ಹೆಸರಾಗಿವೆ. ಮೊದಲು ನೋಟಕ್ಕೆ ಅವು ಗವಿಗಳಂತೆ ಕಾಣುವುದ ರಿಂದ ಅವುಗಳನ್ನು ಗುಹಾಂತರ್ದೇವಾಲಯಗಳೆಂದೂ ಕರೆಯುತ್ತಾರೆ.

ಬಸದಿ ಎಂಬ ಶಬ್ದ ವಸತಿ ಎಂಬ ಶಬ್ದದ ರೂಪಾಂತರ. ವಾಸಿಸುವ ಮನೆ ಎಂಬ ಅರ್ಥವನ್ನು ಅದು ಕೊಡುತ್ತದೆ. ಒಂದು ಕಲ್ಪನೆಯಲ್ಲಿ ಶಿವ, ಇನ್ನೊಂದರಲ್ಲಿ ಬ್ರಹ್ಮ, ಮೂರನೆಯದರಲ್ಲಿ ವಿಷ್ಣು, ನಾಲ್ಕನೆಯದರಲ್ಲಿ ಜಿನ ಇವರು ಪ್ರಾಮುಖ್ಯವಾಗಿ ವಾಸಿಸುವುದರಿಂದ ಇವುಗಳಿಗೆ ಒಟ್ಟಾಗಿ ಬಸದಿ ಎಂಬ ಹೆಸರು ಬಂದಿದೆ; ಜಿನಮಂದಿರಕ್ಕೆ ಬಸದಿ ಎನ್ನುತ್ತಾರೆಂಬುದನ್ನು ನೀವು ಬಲ್ಲಿರಿ. ಇಲ್ಲಿ ಬಸದಿ ಎಂಬ ಹೆಸರನ್ನು ದೇವಮಂದಿರ ಎಂಬ ವ್ಯಾಪಕಾರ್ಥದಲ್ಲಿ ಬಳಸಲಾಗಿದೆ; ಅಲ್ಲದೆ ನಾಲ್ಕನೆಯ ಗುಹಾಂತರ್ದೇವಾಲಯವು—ಎಂದರೆ ಎಲ್ಲಕ್ಕೂ ಎತ್ತರದಲ್ಲಿ ಕೊರೆದ ಕಲ್ಮನೆಯು. ಜಿನ ದೇವರ ವಾಸಕ್ಕಾಗಿ ಕೊರೆಯಲ್ಪಟ್ಟಿರುವುದರಿಂದ ಒಟ್ಟಾಗಿ ಇವುಗಳಿಗೆಲ್ಲ ಬಸದಿಗಳು ಎಂಬ ಹೆಸರು ಪ್ರಾಪ್ತವಾಗಿದ್ದರೂ ಆಗಿರಬೇಕು. ಅದೇನೆ ಇರಲಿ; ಇವುಗಳನ್ನು ಮೇಣ ಬಸದಿಗಳೆಂದು ಕರೆಯುವುದರಲ್ಲಿ ಇನ್ನೂ ಹೆಚ್ಚಿನ ಅರ್ಥವಿದೆ. ಮೇಣದಿಂದ ಎಷ್ಟು ಸುಲಭವಾಗಿ ರಚಿಸಬಹುದೋ ಅಷ್ಟು ಸುಲಭವಾಗಿ ಬೆಟ್ಟದಲ್ಲಿ ಈ ದೇವ ಮಂದಿರಗಳು ನಿರ್ಮಿತವಾಗಿರುವುದರಿಂದ ಇವುಗಳು ಮೇಣಬಸಿದಿಗಳೇ ಸರಿ; ನಮ್ಮ ಹಿರಿಯರ ಕೈಯಲ್ಲಿ ಬೆಟ್ಟದ ಶಿಲೆ ಮೇಣದಂತೆ ಮೃದುವಾಗಿ ರೂಪುಗೊಂಡಿತು.

ಅದೇನೇ ಇರಲಿ; ಕೆನೆಮೊಸರು ಅವಲಕ್ಕಿ ಮೆದ್ದು ಸಿದ್ಧರಾದ ನಮ್ಮ ಚಿತ್ತವನ್ನು ಬಾದಾಮಿಯ ಮಗ್ಗುಲಲ್ಲಿಯೇ ಇರುವ ನೈಋತ್ಯದ ಬೆಟ್ಟ ಕರೆಯುತ್ತದೆ. ಅದರ ಆಕರ್ಷಣೆಗೆ ಒಳಗಾಗಿ ನಾವು ಬಳಿಸಾರಿದಾಗ "ಬನ್ನಿ, ಹತ್ತಿ ಬನ್ನಿ" ಎಂದು ನೇರವಾಗಿ ಮೇಲಕ್ಕೇರುವ ಶಿಲಾಸೋಪಾನ ದಾರಿ ನಮ್ಮನ್ನು ಪ್ರೇರಿಸುತ್ತದೆ. ಅದರ ಪ್ರೇರಣೆಯಿಂದ ತವಕಗೊಂಡು ನಾವು ಮೇಲೆ ಏರುತ್ತಿರುವಾಗಲೇ ನಮ್ಮನ್ನು ಒಮ್ಮೆಲೇ ತಡೆದು ನಿಲ್ಲಿಸುತ್ತದೆ ಶೈವ ಮಂದಿರದ ತಾಂಡವೇಶ್ವರನ ಮೂರ್ತಿ. ಅಬ್ಬಾ, ಏನು ಭಂಗಿಯದು! ಶಿವ ತಾಂಡವವೆಂದರೆ ಏನೆಂಬುದನ್ನು ತಿಳಿಯ ಬಯಸುವವರು ನೋಡಬೇಕು ಈ ಮೂರ್ತಿಯನ್ನು. ನಾಟ್ಯದ ಆವೇಶ ಮೂರ್ತಿಯ ಅಂಗಾಂಗಗಳೆಲ್ಲೆಲ್ಲ ಹೊಮ್ಮಿ ಹೊರಚೆಲ್ಲಿದಂತಿದೆ. ಆಂತರ್ಯದಲ್ಲಿ ಕೆರಳಿದ ಭಾವ ಚಾಚಿದ ಕೈಗಳಿಂದ ವೀಚಿ ವೀಚಿಯಾಗಿ ಹರಿಯುವಂತೆ ಭಾಸ

ವಾಗುತ್ತದೆ. ಮುಖದಲ್ಲಿ ತನ್ಮಯತೆ ಪಡಿಮೂಡಿದೆ. ಅಂಗಾಂಗಗಳ ಚಲನೆ ತಾನೇ ತಾನಾಗಿ ದಶದಿಕ್ಕುಗಳನ್ನು ನಿಲುಕುವಂತಿದ್ದರೂ ಮುಕುಟ ದಿಂದ ಮೆರೆಯುವ ಶಿರವು ಆ ಚಲನೆಯನ್ನೆಲ್ಲ ಮೀರಿದ ಸ್ಥಿರತೆಯನ್ನು ಸೂಚಿಸುತ್ತದೆ. ಬದಿಯಲ್ಲಿರುವ ನಂದಿ ದೀನ ಭಾವದಲ್ಲಿ ಲೀನವಾಗಿದೆ. ನಾಟ್ಯ ಲೀಲೆಗೆ ಮಾರುಹೋದ ಮಗ್ಗುಲಿನ ಗಣಪತಿ ಎದ್ದು ನಿಂತು ಮೃದಂಗದ ಮೇಲೆ ಚಾಪ ಹಾಕುತ್ತಾನೆ. ಹೀಗೆ ರೂಪ ಮತ್ತು ರಾಗ ಗಳು ಒಂದರಲ್ಲಿ ಒಂದು ಸಾಮರಸ್ಯ ಹೊಂದಿವೆ. ಒಟ್ಟಿನಲ್ಲಿ ಬೆಳ್ಳಿಯ ಬೆಟ್ಟದ ಶಿವಚೈತನ್ಯ ಬಾದಾಮಿ ಬೆಟ್ಟದಿಂದ ಎದ್ದು ಬಂದಂತಿದೆ. ಈ ಶೈವ ಗುಹೆಯೊಳಗೆ ತಾಂಡವ ಮೂರ್ತಿಯಲ್ಲದೆ ಮಹಿಷಾಸುರ ಮರ್ದಿನಿ ತ್ರಿಶೂಲಧಾರಿಯಾದ ಶಿವ, ಗಣಪತಿ ಮೊದಲಾದ ಮೂರ್ತಿಗಳೂ ನೋಡ ತಕ್ಕವುಗಳಾಗಿವೆ.

ಶೈವ ಗುಹೆಯಿಂದ ಬೆಟ್ಟದ ಎರಡನೆಯ ಹಂತಕ್ಕೆ ಏರಿ ಹೋದರೆ ಎರಡನೆಯ ಕಲ್ಮನೆಯಲ್ಲಿ ಮುಖ್ಯವಾಗಿ ತ್ರಿವಿಕ್ರಮ ಮೂರ್ತಿ ದೃಷ್ಟಿ ಯನ್ನು ಸೆಳೆಯುತ್ತದೆ. ಅದನ್ನು ನೋಡಿಕೊಂಡು ಪಾದಗಟ್ಟೆಯ ದಾರಿ ಯಿಂದ ಮೂರನೆಯ ಹಂತಕ್ಕೆ ಏರಿ ಹೋಗುವುದೇ ತಡ; ಮೇಣಬಸತಿ ಗಳಲ್ಲೆಲ್ಲ ಅತ್ಯಂತ ಸುಂದರವೂ ಸುವಿಶಾಲವೂ ಆದ ವಿಷ್ಣು ಮಂದಿ ರವು ಕಂಗೊಳಿಸುವುದು. ಅದರ ಮುಖ ಮಂಟಪದ ಮುಖ್ಯ ಮೂರ್ತಿ ಯೆಂದರೆ ಅರ್ಧನಾರೀ ನಟೇಶ್ವರ. ವೈಷ್ಣವ ಮಂದಿರದ ಭಿತ್ತಿಗಳ ಮೇಲೆ ಕೊರೆದ ಗರುಡವಾಹನ, ಲಕ್ಷ್ಮೀನಾರಾಯಣ, ನಾರಸಿಂಹ, ತ್ರಿವಿಕ್ರಮ ಮೊದಲಾದ ಶಿಲಾ ಮೂರ್ತಿಗಳು ಪ್ರೇಕ್ಷಕರನ್ನು ಮುಗ್ಧ-ಗೊಳಿಸುವಂತಿವೆ.

ವೈಷ್ಣವ ಗುಹೆಯಲ್ಲಿ ಪ್ರಾಮುಖ್ಯವಾಗಿ ನಿರೀಕ್ಷಿಸಿ ಪರೀಕ್ಷಿಸ ಬೇಕಾದ ಶಿಲ್ಪಕಲೆಯು ಎಲ್ಲಕ್ಕೂ ಮುಂದಿನ ಸಾಲು ಕಂಬಗಳೂ ಛಾವಣಿಯೂ ಕೂಡಿದ ಎಡೆಗಳಲ್ಲಿ ಬಿಡಿಸಿದ ಮದನ ಕೈ ವಿಗ್ರಹಗಳಿಗೆ ಸಂಬಂಧಿಸಿದುದು. ಮದನ ಕೈ ವಿಗ್ರಹಗಳು ಒಂದೊಂದು ಕಂಬದ ತುದಿ ಯಲ್ಲಿ ಮೂರು ಮಗ್ಗಲುಗಳಲ್ಲಿ ಮೂರು ಜೋಡು ವಿಗ್ರಹಗಳಾಗಿ ಕಟಿ

ಯಲ್ಪಟ್ಟಿವೆ. ಅವುಗಳ ನಿಲವು ಎತ್ತರದ ನಿಲವು; ಎದ್ದು ನಿಂತ ನಿಲವಿನಲ್ಲಿವೆ. ಜೋಡು ಪ್ರತಿಮೆಯೆಂದು ಹೇಳಿದೆನಷ್ಟೆ? ಆ ಜೋಡು ಪ್ರತಿಮೆಗಳಲ್ಲಿ ಒಂದು ಗಂಡು ಪ್ರತಿಮೆ; ಇನ್ನೊಂದು ಹೆಣ್ಣು ಪ್ರತಿಮೆ. ಅವು ಸುಮಾರಾಗಿ ಮಾನವನ ಎತ್ತರದಷ್ಟೇ ಎತ್ತರವಾಗಿವೆ. ಒಂದೊಂದು ಜೋಡು ಒಂದೊಂದು ಭಂಗಿಯಲ್ಲಿ ನಿಂತು ಒಂದೊಂದು ಒಲವಿನ ಬಗೆಯನ್ನು ಒಂದೊಂದು ಚೆಲುವಿನಲ್ಲಿ ಸುಳುಹುಗಾಣಿಸುತ್ತವೆ.

ಈ ಜೋಡು ಪ್ರತಿಮೆಗಳ ವೈಶಿಷ್ಟ್ಯವೆಂದರೆ ಅವುಗಳ ಮುಖದಲ್ಲಿ ತುಳುಕುವ ಜೀವಕಳೆ. ಅವುಗಳ ಅಂಗಾಂಗಗಳಲ್ಲಿ ಪ್ರವಹಿಸುವಂತಿರುವ ಚೈತನ್ಯ. ಅವು ಬೇಲೂರು ಚೆನ್ನಕೇಶವ ದೇವಾಲಯದ ಶಿಲಾಬಾಲಿಕೆಯರಷ್ಟು ನುಣುಪಾಗದೆ ಇರಬಹುದು. ಆದರೆ ಈ ತುಂಗ ಪ್ರತಿಮೆಗಳ ಅಂಗ ಸೌಷ್ಠವ, ಜೀವಕಳೆ, ಇನ್ನಾವ ಶಿಲಾ ಪ್ರತಿಮೆಗಳಿಗಿಂತಲೂ ಮೇಲು ಮಟ್ಟದವುಗಳಾಗಿವೆ. ಅಲ್ಲದೆ ಹೊಯ್ಸಳ ಮಾರ್ಗಕ್ಕೆ ಚಾಲುಕ್ಯ ಮಾರ್ಗವೇ ಮೂಲವೆಂಬುದನ್ನು ಈ ವೈಷ್ಣವ ಗುಹೆಯ ಮದನ ಕೈ ವಿಗ್ರಹಗಳ ಪರಿಶೀಲನೆಯಿಂದ ಸಹಜವಾಗಿ ಕಂಡು ಹಿಡಿಯಬಹುದು. ಲತಾ ಮಂಟಪದ ಹಿನ್ನೆಲೆ ಹಾಗು ಭಾವಾಭಿನಯ. ಇವು ಚಾಲುಕ್ಯ ಹಾಗು ಹೊಯ್ಸಳ ಶಿಲ್ಪ ಮಾರ್ಗಗಳೆರಡಕ್ಕೂ ಸರ್ವ ಸಾಧಾರಣವಾದವುಗಳು. ಬಾದಾಮಿಯ ಮೂರ್ತಿ ಶಿಲ್ಪದಲ್ಲಿ ಅಲಂಕಾರ ಕಡಿಮೆ; ಆದರೆ ಜೀವಕಾಂತಿ ಹೆಚ್ಚು. ನುಣುಪು ಕಡಿಮೆ, ಆದರೆ ನೈಜ ಹೆಚ್ಚು. ತೊಡಕು ಕಡಿಮೆ, ಆದರೆ ಭಾವದ ಬೆಡಗು ಹೆಚ್ಚು. ಪಟ್ಟದ ಕಲ್ಲಿನ ವಿರೂಪಾಕ್ಷ ದೇವಾಲಯದ ಒಳಗೋಡೆಯ ಸುತ್ತಲೂ ಕೆಳಭಾಗದಲ್ಲಿ ಕಟೆದು ನಿಲ್ಲಿಸಿದ ವಿಗ್ರಹಗಳಿಗೂ ಇವುಗಳಿಗೂ ಹೋಲಿಕೆ ಹೆಚ್ಚು. ಇವೆರಡೂ ಶುದ್ಧ ಚಾಲುಕ್ಯ ಮಾರ್ಗವನ್ನು ಎತ್ತಿ ತೋರುತ್ತವೆ.

ವಿಷ್ಣು ಗುಹೆಯ ಈ ಜೋಡು ಜೋಡು ಪ್ರತಿಮೆಗಳ ಮುಖದಲ್ಲಿ ಕಣ್ಣು ಮೂಗುಗಳು ಸ್ಪಷ್ಟವಾಗಿ ಮೂಡಿವೆ; ಅವುಗಳ ಅವಯುವಗಳು ಸಮಕಟ್ಟಾಗಿವೆ; ಅಳತೆಗೆ ಅಳವಟ್ಟಿವೆ. ಕಂಬದಿಂದ ಈ ಬಿಂಬಗಳು ಜೀವ ತುಂಬಿ ಜೀಕಿ ಬರುವಂತಿವೆ. ಸರಸ ದಾಂಪತ್ಯದ ವಿವಿಧ ನಿಲವು

ಗಳನ್ನು ಚಿತ್ರಿಸುವ ಈ ಗಂಡು ಹೆಣ್ಣುಗಳ ಎತ್ತರ ಸುಮಾರಾಗಿ ಅಷ್ಟಷ್ಟೆ. ಒಂದು ಜೋಡು ಭುಜ ಭುಜದ ಮೇಲೆ ಕೈ ಇಟ್ಟು, ನೇಹ ತುಂಬಿ-ತುಳುಕುವ ಕಣ್ಣಿನಲ್ಲಿ ಕಣ್ಣು ನೆಟ್ಟು, ನೋಡುವ ಸಮರಸ ಭಾವವನ್ನು ದೀಪ್ತಗೊಳಿಸಿದರೆ ಇನ್ನೊಂದರಲ್ಲಿ ಹೆಣ್ಣು ಗಂಡಿನ ಎದೆಗೆ ತಲೆಯೂನಿಸಿ ಕೈಯಲ್ಲಿ ಕೈಯಿತ್ತು ನಿಂತಿರಲು ಗಂಡು ಆ ಹೆಂಣಿನ ಬಡನಡುವನ್ನು ತನ್ನ ಇನ್ನೊಂದು ಕೈಯಿಂದ ಬಳಸಿದ ಅಂಗವಿನ್ಯಾಸವು ದಂಪತಿಗಳ ಅನ್ಯೋನ್ಯ ಪರವಶತೆಯನ್ನು ಕಣ್ಣೆದುರು ತೆರೆದು ತೋರುವಂತಿದೆ. ಮತ್ತೊಂದು ವಿಗ್ರಹ ಯುಗ್ಮದಲ್ಲಿ ಹೆಣ್ಣು ಗಂಡಿನಿಂದ ಅತ್ತತ್ತ ಒಲೆಯು ವಂತೆ ತೋರಿದರೂ ಮತ್ತೆ ಗಂಡಿನತ್ತ ಮೊಗ ತಿರುಹಿ ಇಡಲೋ ಬಿಡಲೋ ಎನ್ನುವಂತೆ ಗಂಡಿನ ಎದೆಯ ಮೇಲೆ ಕೈಯಿಟ್ಟು ನೋಡುವ ನೋಟ ಪ್ರಣಯ ಕೋಪದ ಹುಸಿ ಮಾಟವನ್ನು ಪ್ರತಿಬಿಂಬಿಸುವಂತಿದೆ. ಬೇರೊಂದ ರಲ್ಲಿ ಗಂಡಿನ ಪ್ರಣಯ ಸೂಚನೆಗೆ ಹೆಣ್ಣು ಲಜ್ಜಾ ಭಾರದಿಂದ ಬಳುಕಿ ನಿಂತ ನಿಲವು ಅನುಪಮವಾಗಿದೆ. ಮತ್ತು ಒಂದರಲ್ಲಿ ನಲ್ಲನ ಸುಂದರ ಸುಗಂಭೀರ ವದನವನ್ನು ಹೆಣ್ಣು ತನ್ನ ಕಂಗಳ ಮಂಗಳಾರತಿ. ಎತ್ತ ನೋಟ ಸಾನಂದಾಶ್ಚರ್ಯವನ್ನು ಅಪ್ರತಿಮವಾದ ರೀತಿಯಲ್ಲಿ ಪ್ರತಿ ಬಿಂಬಿಸುವಂತಿದೆ. ಪುರುಷನ ಚಿತ್ತ ಅದೇಕೋ ಶೂನ್ಯವಾಗಿರಲು ಮನ ದನ್ನೆ ತನ್ನ ಒಂದು ಕಾಲನ್ನು ಇನ್ನೊಂದು ಕಾಲಿನೊಡನೆ ಬೆಡಗಿನಿಂದ ಹೆಣೆದು ಮನದನ್ನನ ಎದೆ ಮುಟ್ಟಿ ಮಣಿದು ಮುಖವನ್ನು ಮೇಲಕ್ಕೆತ್ತಿ ನೋಡುವ ದೈನ್ಯದ ನೋಟವನ್ನು ಮಗುದೊಂದ ಪ್ರತಿಮೆಗಳ ಜೋಡು ಕನ್ನಡಿಸುತ್ತದೆ. ಹೀಗೆಯೇ ಸರಸ ದಾಂಪತ್ಯದ ಇನ್ನೂ ಕೆಲವು ಬೆಡಗು ಬಿನ್ನಾಣ, ವಿಭ್ರಮ, ವಿಲಾಸಗಳನ್ನು ಬಾದಾಮಿಯ ಈ ಮೇಣ ಬಸ ತಿಯ ಮದನ ಕೈ ವಿಗ್ರಹಗಳಲ್ಲಿ ಕಾಣಬಹುದು.

ಮೂರನೆಯ ಗುಹಾಂತದೇವಾಲಯವನ್ನು ಮನದಣಿ ನೋಡಿ ಅಲ್ಲಿಂದ ಇನ್ನು ಮೇಲಕ್ಕೇರುವ ಸೋಪಾನ ದಾರಿಯಲ್ಲಿ ಹೆಜ್ಜೆ ಚೆಲ್ಲಿ ನಾಲ್ಕನೆಯ ಹಂತವನ್ನು ಮುಟ್ಟಿದರೆ ಅಲ್ಲಿ ಜೈನ ಗುಹೆಯು ಕಣ್ಣಿಗೆ ಬೀಳುತ್ತದೆ. ಈ ಗುಹೆಯು ತೀರ ಸಾದಾ ರೀತಿಯದು. ಅದರ ಬಿತ್ತಿಗಳಲ್ಲಿ ಹಾಗು ಕಂಬಗಳಲ್ಲಿ ಚಿಕ್ಕ ಚಿಕ್ಕ ಜೈನ ಮೂರ್ತಿಗಳನ್ನು ಅತ್ಯಂತ ನಿರಾಡಂಬರ

ವಾದ ಶೈಲಿಯಲ್ಲಿ ಕೆತ್ತಿದ್ದಾರೆ. ಕೆರಳುತ್ತ ಬಂದ ಕೌತುಕವು ಇಲ್ಲಿ ಶಾಂತಿಯಲ್ಲಿ ಕರಗಿ ಹೋಗುತ್ತದೆ.

ಹೀಗೆ ಬೆಟ್ಟದ ನಾಲ್ಕು ಹಂತಗಳಲ್ಲಿ ಕೊರೆದ ಈ ನಾಲ್ಕು ಕಲ್ಮನೆಗಳು ನಾಲ್ಕು ದೇವತೆಗಳ ನಿವಾಸ ಸ್ಥಳವಾಗಿದೆಯಲ್ಲದೆ ಅಂದಿನ ಕನ್ನಡ ನಾಡಿನ ಮುಖ್ಯವಾದ ಮೂರು ಧರ್ಮಗಳನ್ನು ಪ್ರತಿನಿಧಿಗೊಳಿಸುತ್ತವೆ. ಈ ಸಂಬಂಧ ದಲ್ಲಿ ಗಮನಿಸಬೇಕಾದ ಸಂಗತಿಯೊಂದುಂಟು. ಅದು ಕನ್ನಡ ನಾಡಿನ ಶ್ರೇಷ್ಠವಾದ ಸಂಸ್ಕೃತಿಗೆ ಸಂಬಂಧಪಟ್ಟುದು. ಪರಧರ್ಮ ಸಹಿಷ್ಣುತೆಯು ಅತಿ ಪ್ರಾಚೀನ ಕಾಲದಿಂದಲೂ ಕನ್ನಡ ನಾಡಿನ ಸಂಸ್ಕೃತಿಯ ವೈಶಿಷ್ಟ್ಯಗಳಲ್ಲಿ ಒಂದಾಗಿದೆ. ಚಾಲುಕ್ಯ ಅರಸರು ವೈಷ್ಣವ ಧರ್ಮವನ್ನು ಅನುಸರಿಸು ತ್ತಿದ್ದರೂ ಅವರು ತಮ್ಮ ರಾಜ್ಯದಲ್ಲಿಯ ಶೈವ ಮತ್ತು ಜೈನ ಧರ್ಮ ಗಳನ್ನು ಅತ್ಯಂತ ಸೌಹಾರ್ದ ದೃಷ್ಟಿಯಿಂದ ಕಾಣುತ್ತಿದ್ದವೆಂಬುದಕ್ಕೆ ಬಾದಾಮಿಯಲ್ಲಿ ಅವರು ಕೊರೆಯಿಸಿದ ಈ ಗುಹಾಂತರ್ದೇವಾಲಯ ಗಳು ನಿದರ್ಶನವಾಗಿ ನಿಂತಿವೆ.

ಈ ಸಂದರ್ಭದಲ್ಲಿ ಇನ್ನೊಂದು ಸಂಗತಿಯನ್ನು ನೆನಪಿಡಬೇಕು. ಆಗಿನ ಕಾಲ ರಾಜಾಭಿಪ್ರಾಯದ ಕಾಲ. ರಾಜನಾದವನು ತನಗೆ ಸೇರಿದು ದನ್ನು ಪೋಷಿಸಿ, ಸೇರದುದನ್ನು ಹತ್ತಿಕ್ಕಬಹುದಾದ ಕಾಲ. ಆದರೆ ಕನ್ನಡ ದೊರೆಗಳು ಪ್ರಜರ ಕಲ್ಯಾಣವನ್ನು ದೃಷ್ಟಿಯಲ್ಲಿ ಇಟ್ಟು ನಡೆಯು ತ್ತಿದ್ದರು. ಪ್ರಜರು ಯಾವ ಯಾವ ಧರ್ಮವನ್ನೇ ಅನುಸರಿಸುತ್ತಿರಲಿ ಅವರನ್ನೆಲ್ಲ ಸಮ ದೃಷ್ಟಿಯಿಂದ ಕಾಣುತ್ತಿದ್ದರು. ಸಮ ದೃಷ್ಟಿಯುಳ್ಳವ ನಿಗೆ 'ಸಮದರ್ಶಿ' ಎಂದು ಹೆಸರು. ಪ್ರಜಾವತ್ಸಲರಾಗಿದ್ದ ಕನ್ನಡ ಅರಸ ರೆಲ್ಲ ಸಮದರ್ಶಿಗಳೇ ಆಗಿದ್ದರು. ಕನ್ನಡ ಸಂಸ್ಕೃತಿ ಹೀಗಿದ್ದುದರಿಂದಲೇ ಭಗವನ್ನಾರಾಯಣನು ಚಾಲುಕ್ಯರ ಕುಲದೇವತೆಯಾಗಿದ್ದರೂ ಅವರು ವಿಷ್ಣು ದೇವಾಲಯದೊಂದಿಗೆ ಶಿವಾಲಯ ಜಿನಾಲಯಗಳನ್ನು ಬಾದಾ ಮಿಯ ಬೆಟ್ಟದಲ್ಲಿ ಕೊರೆಯಿಸಿದರು.

ಬಾದಾಮಿಯ ಈ ಕಲ್ಮನೆಗಳನ್ನು ಕೊರೆಯಿಸಲು ಮೊದಲು ಮಾಡಿ ದವನು, ಚಾಲುಕ್ಯ ಮನೆತನದ ಮಂಗಳೇಶನೆಂಬ ದೊರೆ. ಸುವಿಖ್ಯಾತ

ಪರಾಕ್ರಮಶಾಲಿಯಾದ ೨ನೆಯ ಪುಲಿಕೇಶಿಯ ಚಿಕ್ಕಪ್ಪನವನು. ಮಂಗಳೇಶನು ಕ್ರಿ. ಶ. ೫೬೭ರಿಂದ ಕ್ರಿ. ಶ. ೬೧೦ರ ವರೆಗೆ ಕನ್ನಡ ನಾಡಿನ ದೊರೆಯಾಗಿದ್ದನು. ಬಾದಾಮಿಯ ಗುಹಾಂತರ್ದೇವಾಲಯಗಳಲ್ಲೆಲ್ಲ ಅತ್ಯಂತ ವಿಸ್ತಾರವೂ, ಸುಂದರವೂ ಆದ ವೈಷ್ಣವ ಗುಹೆಯು ಅವನ ಕಾಲದಲ್ಲಿಯೇ ಪೂರ್ಣವಾಗಿ ನಿರ್ಮಿತವಾಯಿತು. ಚಾಲುಕ್ಯ ಮಾರ್ಗದ ಶಿಲ್ಪ ಅಂದಿನಿಂದಲೇ ಪ್ರಾರಂಭವಾಯಿತೆಂದು ಹೇಳಬಹುದು.

ವಾಸ್ತುಶಿಲ್ಪ ಮಾತ್ರವಲ್ಲ ಈ ಕಲ್ಮನೆಗಳಲ್ಲಿ ಕಾಣುವುದು. ಸೂಕ್ಷ್ಮವಾಗಿ ಅವಲೋಕನ ಮಾಡಿದರೆ (ಶತ ಶತಮಾನಗಳ ವರೆಗೆ ಉಳಿಯುವಂತಹ) ವರ್ಣ ಚಿತ್ರಕಲೆಯೂ ಗೋಚರವಾಗುವುದು. ಈ ವರ್ಣ ಚಿತ್ರಗಳು ಅಜಂತೆಯ ಗುಹೆಗಳಲ್ಲಿ ಬಿಡಿಸಿದ ವರ್ಣ ಚಿತ್ರಗಳ (fresco-paintings) ಮಾದರಿಯವು. ಕಾಲನ ಪ್ರಭಾವಕ್ಕೆ ಸಿಕ್ಕು ಮಸಮಸಕಾದ ಈ ವರ್ಣ ಚಿತ್ರಗಳನ್ನು ಕನ್ನಡ ನಾಡಿನ ಇಂದಿನ ಕಲಾವಿದರಲ್ಲೊಬ್ಬರಾದ ಶ್ರೀ. ಎಮ್. ಜಿ. ಮಿಣಜಿಗಿ ಎಂಬವರು ಅತ್ಯಂತ ಪ್ರಯಾಸದಿಂದ ಪ್ರತಿ ಮಾಡಿದ್ದಾರೆ. ಆ ಪ್ರತಿಗಳನ್ನು ಕಂಡರೆ ಮೂಲ ಕಲೆಯ ಕಲ್ಪನೆಯಾಗದಿರದು.

— — — —

# ನಿಟ್ಟು ನಾಲ್ಕು

## ಕಲೆ–ಕಾವ್ಯ

# ಜೋಗದ ಝೋಕ್

## ಒಂದು ವಿಮರ್ಶೆ:

ಜೋಗದ ಝೋಕ್ ಲಾವಣಿ ದಾಟಿಯಲ್ಲಿ ಹೊಮ್ಮಿದ ಒಂದು ಉತ್ಕೃಷ್ಟ ಭಾವಗೀತ ಪ್ರಕೃತಿಯ ಭವ್ಯ ಸೌಂದರ್ಯವನ್ನು ಎತ್ತಿ ತೋರಿಸುವ ಇಂಥ ಲಾವಣಿಗಳು ಕನ್ನಡದಲ್ಲಿ ಬಹಳ ಕಡಿಮೆ; ಇಲ್ಲವೆಂದರೂ ಸಲ್ಲುವುದು. ಮೂಗೂರ ಮಲ್ಲಪ್ಪನವರು ಪ್ರಥಮ ಶ್ರೇಣಿಯ ಕವಿಗಳೆಂಬುದಕ್ಕೆ ಅವರು ರಚಿಸಿದ ಜೋಗದ ಝೋಕು ಸಾಕ್ಷ್ಯವನ್ನು ನುಡಿಯುತ್ತದೆ. ಅವರ ಕವಿತಾ ಶಕ್ತಿ, ಅವರಿರುವಾಗ ಜನಕ್ಕೆ ತೋರದೆ ಹೋಯಿತೆಂದು ಕಾಣುತ್ತದೆ. 'ಜೋಗದ ಝೋಕ್' ನಂತಹ ಇನ್ನೆಷ್ಟು ಕವನಗಳು ಅವರ ಎದೆಯಲ್ಲಿ ಉಳಿದುಕೊಂಡು ಹೋದುವೋ ಬಲ್ಲವರಾರು ?

ಕವನದ ಹೆಸರೇ ಆಕರ್ಷಕವಾಗಿದೆ. ಕವಿಯ ಚಿತ್ತ ಜೋಗದ ಝೋಕಿನಲ್ಲಿ ಲೀನವಾಗಿ ಹೋದುದರ ಪರಿಣಾಮವೇ ಈ ಲಾವಣಿ ಎಂಬುವುದನ್ನು ಅದು ಸಾರಿ ಹೇಳುತ್ತದೆ. ಜೋಗದ ಝೋಕನ್ನು ನೋಡಿ ನಲಿಯುವ ಅವರ ಚಿತ್ತ ಸುಪ್ರಸನ್ನತೆಗೆ ಆಗರವಾಗಿರಲಿಕ್ಕೆ ಸಾಕು. ಅವರು ತೋರಿಸಿದ ಜೋಗದ ಚಿತ್ರದೊಡನೆ ನಾವು ಅವರ ಹೃದಯದ ಚಿತ್ರವನ್ನೂ ಕಾಣುತ್ತೇವೆ. ಮೊದಲನೆಯ ಪದ್ಯದಲ್ಲಿಯೇ ಕವಿ ತನ್ನ ಚಿತ್ತದಂತೆಯೇ ನಮ್ಮ ಚಿತ್ತವನ್ನೂ ತುಂಬಾ ತಿಳಿಮಾಡಿ ಅದರಲ್ಲಿ ಜೋಗದ ಬಯಕೆಯನ್ನು ಮೂಡಿಸುತ್ತಾನೆ. ಜೋಗದ ಗುಂಡಿಯನ್ನು ನೋಡದ ಬಾಳುವೆ ಏತರ ಬಾಳುವೆ?— ಎಂಬ ಕವಿಯ ದನಿಗೆ ನಮ್ಮ ಎದೆ ಮಾರ್ದನಿಗೂಡುತ್ತದೆ.

ಕವಿ ನಮ್ಮನ್ನು ಒಮ್ಮೆಲೇ ಜೋಗಕ್ಕೆ ಕರೆದೊಯ್ಯುವುದಿಲ್ಲ. ಕಲಾವಿದನಾದವನು ಕಲೆಯ ಮುಖ್ಯ ವಿಷಯದ ಅವತಾರಕ್ಕೆ ಮೊದಲು ತಕ್ಕ ಸನ್ನಿವೇಶವನ್ನು ಸಿದ್ಧಗೊಳಿಸಬೇಕಾಗುತ್ತದೆ. ಕಂಡು ನಲಿಯುವ ಕಣ್ಣನ್ನು ಕೇಳಿ ಒಲಿಯುವ ಕಿವಿಯನ್ನು ಅನುಭವಿಸಿ ಆನಂದ ಪಡೆಯುವ ಎದೆಯನ್ನು ಹದಗೊಳಿಸಬೇಕಾಗುತ್ತದೆ. ಜೋಗದ ಝುಹೋಕ್ ಬರೆದ ಕವಿ ಕಣ್ಣಿಗೆ ಕಟ್ಟುವಂತೆ ಜೋಗದ ನಾಲ್ದೆಸೆಯ ಸನ್ನಿವೇಶವನ್ನು ಮೊದಲು ನಾಲ್ಕಾರುಗೆರೆ ಎಳೆದು ಚಿತ್ರಿಸಿದ್ದಾನೆ. ಅದರ ಜೊತೆಗೆ ತನ್ನ ನಚ್ಚಿನ ಕನ್ನಡ ನಾಡಿನ ಚೆಲುವನ್ನು ಚಿನ್ನದ ಗೆರೆಗಳಿಂದ ಚಿತ್ರಿಸಿದ್ದಾನೆ. ಪ್ರೇಮದ, ಅಭಿಮಾನದ ಬಣ್ಣವನ್ನು ಅದರಲ್ಲಿ ತುಂಬಿದ್ದಾನೆ. "ನಾಡಿನೊಳಗೆ ನಾಡು ಚೆಲುವು ಕನ್ನಡ ನಾಡು." ಬೆಳ್ಳಿ ಬಂಗಾರ ಬೆಳೆಯುತ್ತವೆ ಬೆಟ್ಟ ಕಾಡು" ಎಂಬ ಚರಣಗಳಲ್ಲಿ ಕವಿಯ ನಾಡೊಲುಮೆ ಪಡಿಮೂಡಿದೆ

ಕವಿ ಭೂಮಿತಾಯಿಯನ್ನು ಬಾಸಿಂಗ ಧರಿಸಿದ ಮದುವಣಗಿತ್ತಿಯ ರೂಪದಲ್ಲಿ ನಮ್ಮ ಮುಂದೆ ನಿಲ್ಲಿಸಿ ಅವಳನ್ನು ಸಿಂಗಾರಗೊಳಸುವುದಕ್ಕಾಗಿ 'ಶರವತಿ'ಯನ್ನು ಕರೆದು ತರುತ್ತಾನೆ. ಹೀಗೆ ನಿಸರ್ಗವನ್ನು ಮಾನವ ಜೀವನ ಸೌಂದರ್ಯದ ಬೆಳಕಿಸಿ ತೋರಿಸುತ್ತ ಇಂಥ ಸೊಬಗಿನ ಸನ್ನಿವೇಶದಲ್ಲಿ ಒಂದು ದಾರಿ ಸುಳಿಯುತ್ತದೆ. ಆ "ಅಂಕು ಡೊಂಕ ವಂಕಿಮುರಿ ರಸ್ತೆದಾರಿ"ಯಲ್ಲಿ ನಮ್ಮ ಮನಸ್ಸು ನಡೆದು ಹೋಗುವಂತೆ ಭಾಸವಾಗುತ್ತದೆ. "ಹತ್ತಿ ಇಳಿದು ಸುತ್ತಿದಂಗೆ ಹಾವಿನ ಮರಿ" ಎಂದಾಗ ಆ ದಾರಿ ನಮ್ಮ ಕಲ್ಪನೆಯ ಸೀಮೆಯಲ್ಲಿಯೇ ಹರಿದಂತೆ ಅನುಭವವಾಗುತ್ತದೆ. 'ತೊಟ್ಟಿಲ ಜೀಕಿ ಆಡಿದಂಗ ಮನಸಿನ್ ಲಹರಿ' ಎಂಬ ಚರಣದಲ್ಲಿ ರವಿಯ ಸೌಂದರ್ಯ ರಸಾನುಭವ ಚರಮ ಸಿಮೆಯನ್ನೇ ಮುಟ್ಟಿದೆ.

'ಅಂಕು ಡೊಂಕು ವಂಕಿ ಮುರಿ ರಸ್ತೆ ದಾರಿ'ಯಿಂದ ನಾವು ಮುಂದಕ್ಕೆ ಹೋಗುವನಿತರಲ್ಲಿಯೇ ಶರಾವತಿ ನದಿಗೆ ಹಾಕಿದ ಕಡೆದ ಕಂಬದ ಮೇಲೆ ನಿಂತ ಪೂಲನ್ನು ಸಂದಿಸುತ್ತೇವೆ. ಕವಿ ಅಲ್ಲಿ ನಮ್ಮನ್ನು ಒಂದಿಷ್ಟು ತಡೆದು ನಿಲ್ಲಿಸುತ್ತಾನೆ. ಹೊರಗೆ ಹರಡಿದ ನೋಟವನ್ನು ಒಳಗೆ ಹರಿಬಿಡುತ್ತಾನೆ. ಪೂಲೇನೋ ನಿಂತಿದೆ ಕಟೆದ ಕಲ್ಲಿನ ಕಂಬದ ಮೇಲೆ. ಆ ಕಲ್ಲುಗಳನ್ನು ಕಟೆದವರ ಕಷ್ಟ

ವನ್ನಾರು ಬಲ್ಲರು ? ಪೂಲಿನ ಮೇಲೆ ಸುಖವಾಗಿ ನಡೆದು ಹೋಗುವವರಿಗೆ ತಾನೇ ಹೇಗೆ ಬರಬಹುದು ಆ ಕಲ್ಪನೆ! " ಎಷ್ಟು ಮಂದಿ ಎದೆಯ ಮುರಿದು ಪಡುತ್ತಾರೆ ಕಷ್ಟ ?" ಎಂದು ಕವಿ ಕೇಳಿದಾಗ ನಮ್ಮ ಹೃದಯ ಸಹಾನುಭೂತಿಗೆ ಪಕ್ಕಾಗಿ ಮಿಡಿಯದಿರದು.

ಇದೆಲ್ಲ ಸನ್ನಿವೇಶವನ್ನು ಕುರಿತಾಯಿತು. ಇನ್ನು ಮುಖ್ಯ ಚಿತ್ರದ ಕಡೆಗೆ ತೆರಳಬೇಕು. ಆ ಮೊದಲು ಒಂದಿನಿತು ವಿಶ್ರಾಂತಿ ಅವಶ್ಯಕ. ಬರಿಯ ವಿಶ್ರಾಂತಿಯಲ್ಲ; ಉಪಹಾರದೊಡನೆ ವಿಶ್ರಾಂತಿ. " ಬುತ್ತಿ ಉಣ್ತಿದ್ರ್ಯಣ್ಣ ಇಲ್ಲಿ ಸೊಂಪಾಗಿದೆ " ಎಂದು ಕವಿ ವನಭೋಜನದ ಸುಖಾನುಭವವನ್ನು ನಮಗೆ ನೀಡುತ್ತಾನೆ.

ಇದಕ್ಕೂ ಆಳದಲ್ಲಿ ಇನ್ನೊಂದು ಜೀವನರಹಸ್ಯ ಹುದುಗಿದೆ. ನಾವು ಬಿಟ್ಟುಬಂದ ಲೋಕದಿಂದ ಈ ಲೋಕಕ್ಕೆ ಬುತ್ತಿಯನ್ನು ತಂದಿದ್ದೇವೆಯೇ ? ಪೂರ್ವಸಂಸ್ಕಾರವನ್ನು ಪಡೆದುಕೊಂಡು ಬಂದಿದ್ದೇವೆಯೇ ? ಹಾಗಾದರೆ ಆ ಬುತ್ತಿ, ಆ ಸಂಸ್ಕಾರ, ಈ ಲೋಕದ ಸೊಗಸನ್ನು ಅನುಭವಿಸಲಿಕ್ಕೆ ಸಹಾಯಕಾರಿ. ಎಷ್ಟು ಸಣ್ಣ ಮಾತಿನಲ್ಲಿ ಎಷ್ಟು ದೊಡ್ಡ ತತ್ತ್ವ! 'ಸುಖ ಕೇವಲ ಹೊರಗಿನಿಂದ ಬಂದಿತೆಂದು ತಿಳಿಯುವುದು ಭ್ರಾಂತಿ; ಅದು ಒಳಗಿನಿಂದ ಹೊಮ್ಮುವ ಸತ್ವ. ಆ ಒಳಗಿನ ಸಂಪದವಿದ್ದವರಿಗೆ 'ಇಲ್ಲಿ ಸೊಂಪಾಗಿದೆ.' ಆ ಸೊಂಪಿನಿಂದ ಮನಸು ಕಂಪಾಗುವುದೂ, ಆ ಕಂಪಿನಿಂದ ಜೀವಕ್ಕೊಂದು ತಂಪಾಗುವುದೂ ನಿಜವಾಗಿಯೂ ಒಂದು ಸಂಪೂರ್ಣ ಸುಖಾನುಭವ. ಆ " ತಂಪಿನೊಳಗೆ ಮತ್ತೊಂದೇನೋ ಕಾಣಸ್ತದೆ " ಎಂದಾಗ ಕವಿ ಆ ಸುಖಾನುಭವವೆಂಬ ಗಿರಿಯ ಶಿಖರನನ್ನೇ ಏರಿದ್ದಾನೆ. ಅನಿರ್ವಚನೀಯವಾದ ಸುಖವದು.

ಬುತ್ತಿಯಿದ್ದರೆ ಉಣ್ಣಬೇಕೇನೋ ನಿಜ. ಆದರೆ ಉಣುವದರಲ್ಲಿಯೇ ಎಲ್ಲ ಕಾಲವನ್ನೂ ಕಳೆಯಲಾಗದು. ಇನ್ನೂ ಹೆಚ್ಚಿನ ಕೆಲಸ ಮಾನವ ಜೀವನದಲ್ಲಿದೆ. ಅದಕ್ಕಾಗಿಯೇ "ಊಟ ಮುಗಿದ್ರೇಳು ಇನ್ನೂ ನೋಡೋದದೆ" ಎಂದು ಕವಿ ಎಚ್ಚರಕೊಟ್ಟು ನಮ್ಮನ್ನು ಮುಂದೆ ಸಾಗಿಸಿಕೊಂಡು ಹೋಗುತ್ತಾನೆ.

ಅವನ ವಿನೋದ ನಮ್ಮ ಮನಸಿಗೆ ದಾರಿಯ ಬುತ್ತಿಯಾಗುತ್ತದೆ. "ಬೇಕಾದಲ್ಲಿ ಉಡಪಿ ಮಾವನ ಮನಯೊಂದಿದೆ" ಎಂದು ಕವಿ ಹೇಳಿದಾಗ ತುಟಿಯಲ್ಲಿ ನಗೆಯೂ ನಾಲಗೆಯಲ್ಲಿ ನೀರೂ ಕಾಣಿಸಿಕೊಳ್ಳದಿರವು.

ಈ ರೀತಿ ವಿನೋದದ ಎಳೆಗುಂಟು ಕವಿ ನಮ್ಮನ್ನು ಸೆಳೆದುಕೊಂಡು ಹೋಗುತ್ತಿರುವಾಗಲೇ ಜಲಪಾತ ನಮಗೆ ಗೊತ್ತಾಗದಂತೆ ಬಂದೇ ಬಿಡುತ್ತದೆ. ಸಾಮಾನ್ಯ ಜಲಪಾತವೇ ? " ನೋಡುಗೆಳೆಯ ಜೋಕೆ ಮಾತ್ರ ಪಾತಾಳಗುಂಡಿ ಎಂದು ಕವಿ ಸಲಿಗೆಯಿಂದ ಎಚ್ಚರಿಸುತ್ತಾನೆ. ಒಂದೇ ಸವನೆ ಬಹಳ ಎತ್ತರದಿಂದ ಪಾತಾಳಗುಂಡಿಗೆ ಬೀಳುವ ಜಲಪಾತ ಕಣ್ಣು ಮುಂದೆ ಮಾತ್ರ ತಾಂಡವವಾದರೆ ನಮ್ಮ ಮನದಲ್ಲಿಯೂ ತಾಂಡವವಾಡುತ್ತದೆ. ಒಂದೇ ಸವನೆ ಎಷ್ಟು ಎತ್ತರದಿಂದ—ಎಷ್ಟು ನೀರು—ಎಷ್ಟು ಆಳಕ್ಕೆ!—ಬುದ್ಧಿಗೆ ಭ್ರಮೆಯಾಗದೆ ಹೋದೀತೇ ? ಅಂತೆಯೇ " ನೋಡುತಿದ್ರೆ ಬುದ್ಧಿ ಕೆಟ್ಟು ಹುಚ್ಚಾಗ್ತದೆ"—ಎಂದು ಕವಿಯ ಉದ್ಗಾರ. "ಮನೆಯ ದೀಪವೆಂದು ಮುದ್ದು ಕೊಡಬಹುದೇ ?" "ನಮ್ಮದೆಂದೇ ಹೆಮ್ಮೆಯಲ್ಲ ಜೋಗದ ಗುಡಿ" ಎಂದು ಕವಿ ವಿವೇಕ ಹೇಳುತ್ತಾನೆ.

ಆಮೇಲೆ ಶರಾವತಿಯ ಪ್ರವಾಹದಲ್ಲಿಯೇ ಎಂಬಂತೆ ಕಾಲಪ್ರವಾಹದಲ್ಲಿ ಕವಿ ನಮ್ಮನ್ನು ಹಿಂದಕ್ಕೆ ತೇಲಿಸಿಕೊಂಡು ಹೋಗುತ್ತಾನೆ. ರಾಮಾಯಣ ಕಾಲದ ವರೆಗೆ ! ಜೋಗವೇ ಕಲ್ಪಕಲ್ಪಾಂತರದ ಆ ಪುರಾತನ ಕಥೆಯನ್ನೆಲ್ಲ ಹೇಳುತ್ತದೆ—ಎನ್ನುವ ಮಾತಿನಲ್ಲಿ ಎಷ್ಟು ಸೊಗಸಿದೆ. "ಎಲ್ಲ ಕಥೆ ಹೇಳ್ತದೆ ಕಲ್ಪಾಂತರ" ಕವಿ ಹೀಗೆ ಜೋಗದ ಸುತ್ತಲೂ ಯುಗಯುಗಳಾಚೆಯ ಕಥೆಯನ್ನು ನಮ್ಮ ಅಭಿಮಾನ ಕೆರಳುವಂತೆ ಹೆಣೆದಿದ್ದಾನೆ. ಭಾವತಂತಿಯನ್ನೆ ಮೀಂಟಿದ್ದಾನೆ.

ಹೀಗೆ ಜಲಪಾತವನ್ನು ಮೊದಲು ಇಡಿಯಾಗಿ ತೋರಿಸಿ ಆ ಮೇಲೆ ಬಿಡಿಯಾಗಿ ಅದರ ಚತುರ್ಮುಖಗಳ ಕಡೆಗೆ ನಮ್ಮ ದೃಷ್ಟಿಯನ್ನು ಸೆಳೆಯುತ್ತಾನೆ. ಮುಖಗಳು ನಾಲ್ಕಾದರೂ ಅವುಗಳಲ್ಲಿ ಆಡುವ ಜೀವ ಒಂದೇ ತೋಡುವ ಭಾವ ಒಂದೇ; ಅವು ಹಾಡುವ ಹಾಡು ಒಂದೇ. ಇಷ್ಟೇ ಅಲ್ಲ

ಆ ಜೀವ ಆ ಭಾವ ಆ ನಾದ ಸಮರಸವಾಗಿ ಹೊಮ್ಮುತ್ತವೆ. 'ಆ ಸಾಮರಸ್ಯ ದಲ್ಲಿಯೇ ಸುಖವಿದೆ. ಆ ಸುಖ ನಿನ್ನಿನದಲ್ಲ ಇಂದಿನದಲ್ಲ' ಎಂದಿನಿಂದಲೋ ಅವ್ಯಾಹತವಾಗಿ ಸೂಸುತ್ತಿದೆ.

"ರಾಜಾ"ರಾಕೆಟ್ ರೋರನ್ ಲೇಡಿ ಚತುರ್ಮುಖ
ಜೋಡಗೂಡಿ ಹಾಡತಾವೆ ಹಿಂದಿ ಸುಖ.

ಇಂದಿನ ಸುಖ ತೋರಿಕೆಯುದು. ಹಿಂದಿನ ಸುಖ ನಿಜವಾದುದು ಇಂದು ಜೀವನದಲ್ಲಿ ಸುಖದ ಸೋಗು ಇದೆ; ಹಿಂದೆ ಜೀವನದಲ್ಲಿ ಸುಖದ ಸಾರವಿತ್ತು ಎಂದು ಹಾಡುತಿರಬಹುದೇನೋ ಆ ಚತುರ್ಮುಖ.

ಕವಿಯ ಆಳವಾದ ನೋಟಕ್ಕೆ ಜೋಗದ ಪ್ರವಾಹದಲ್ಲಿ ಒಂದು ಹಿರಿಯ ತತ್ವಕಾಣುತ್ತದೆ. ಜಲಪಾತವಾಗುವ ಮುನ್ನ ಶರಾವತಿ ಒಂದೇ ಪ್ರವಾಹವಾಗಿ ಬರುತ್ತಾಳೆ. ಜೋಗದ ಗುಂಡಿಯಲ್ಲಿ ಧುಮ್ಮಿಕ್ಕುವಾಗ ನಾಲ್ಕು ಎಸಳುಗಳಾಗಿ ಧುಮ್ಮಿಕಿ ಎಷ್ಟೋ ಸಾವಿರ ತುಷಾರಗಳಾಗಿ ಒಡೆದು ಮುಂದೆ ಮತ್ತೆ ಒಂದೇ ಪ್ರವಾಹವಾಗಿ ಹರಿದು ಸಾಗರವನ್ನು ಸೇರುತ್ತಾಳೆ. ಮತವೂ ಹೀಗೆಯೇ ಹಿಂದಿನಿಂದ ಬಂದುದು ಒಂದೇ ಮತ; ಕಾಲಾಂತರದಲ್ಲಿ ಒಂದು ನಾಲ್ಕಾಗಿ, ನಾಲ್ಕು ಸಾವಿರವಾಯಿತು. ಆದರೇನು ಇದೆಲ್ಲ ನಿರಂತರ ವಾದುದುದಲ್ಲ. ಈ ಸಾವಿರ ಮತಗಳು ಅನಂತರದಲ್ಲಿ ಒಂದೇ ಆಗಿ ಕೂಡು ವುದೇ ನಿಜ;

"ಒಂದು ಎರಡು ಮೂರು ನಾಲ್ಕು ಆದಾವ್ ಮತ
ಹಿಂನಿಂದ ಹರಿದು ಬಂದದೊಂದೇ ಮತ
ಗುಂಡಿ ಬಿದ್ದು ಹಾಳಾಗಲಿಕ್ಕೆ ಸಾವಿರ ಮತ
ಮುಂದೆ ಹೋಗಿ ಸೇರುವಲ್ಲಿಗೊಂದೇ ಮತ

ಕವಿ ಹೃದಯದ ಭಕ್ತಿರಸ ಕೊನೆಯ ಎರಡು ಪದ್ಯಗಳಲ್ಲಿ ಉಕ್ಕಿ ಹರಿದಿದೆ. ಕನ್ನಡ ನಾಡಿನ ಬಗೆಗೆ ಕವಿ ತಾಳಿದ ಒಲವನ್ನು ಅವು ಕನ್ನಡಿ ಸುತ್ತವೆ. ಶರಾವತಿ ಕನ್ನಡ ನಾಡಿನ 'ಭಾಗಿರಥಿ' ಜೋಗದ ಜಲಪಾತ ನ್ನನಾಡಿನ ಹೆಮ್ಮೆ. ಪ್ರಪಂಚದ ಕಾತುರವನ್ನೇ ತನ್ನತ್ತ ಸೆಳೆದ ಅಧ್ಭುತ

ರಮ್ಯಸ್ಥಳವದು. ಅದರ ಸೌಂದರ್ಯವು ಜಲದಿಂದ ಸಜೀವವಾಗಿ ಚಲಿಸುವ ಸೌಂದರ್ಯ. ಅದರ ಮುಂದೆ ಎಲ್ಲದು ತಾಜಮಹಲು, ಎಲ್ಲಿಯ ಕೊಹಿನೂರ ಮಣಿ?

ಶಹಾಜಹಾನ ತಾಜಮಹಲು ಕೊಹಿನೂರ್ ಮಣಿ
ಸಾವಿರಿದ್ರು ಸಲ್ಲವಿದಕೆ ಚೆಲುವಿನ್ ಕಣಿ
ಜೀವದಂತ ಶರಾವತಿಗಿನ್ನಾವ್ ದೆಣಿ
ಹೊಟ್ಕಿಕಿಚ್ಚಿಗಾಡಿಕೊಂಡ್ರೆ ಅದಕಾರ್ ಹೊಣಿ

ಕವಿ ಮೂಗೂರು ಮಲ್ಲಪ್ಪನರು ಜೋಗದ ಬಗೆಗೆ ನಮ್ಮ ಕೌತುಕವನ್ನು ಕೆರಳಿಸಿ, ಜೋಗದ ಯಾತ್ರೆಗೆ ನಮ್ಮ ಅಂತರಂಗವನ್ನು ಅಣಿಗೊಳಿಸಿ ನಮ್ಮನ್ನು ಸಲಿಗೆಯ ಸಂಗಡಿಗರನ್ನಾಗಿ ಆಯ್ದುಕೊಂಡು ತಾನು ಮುಂದೆ ನಡೆದು ದಾರಿ ತೋರಿಸುತ್ತಾ, ದಾರಿಯಲ್ಲಿ ಸಂದಿಸುವ ಮಾತು ಹೇಳತ್ತ, ನಡುನಡುವೆ ನಯವಾದ ವಿನೋದವನ್ನು ಬೆರಸಿ ನಮ್ಮ ಮುಖವನ್ನು ನಗೆಯ ಬೆಳಕಿನಲ್ಲಿ ಮೀಯಿಸಿ ಮಿನುಗಿಸುತ್ತ, ಅಲ್ಲಲ್ಲಿ ಕರುಣಾರಸ ಹರಿಸಿ ನಮ್ಮ ಎದೆಯನ್ನು ತೊಳೆಯುತ್ತ, ಪ್ರಸಂಗಕ್ಕನುಗುಣವಾಗಿ ಜೀವನರಹಸ್ಯವನ್ನು ಬೆರಳಿಟ್ಟು ತೋರುತ್ತ, ನಮ್ಮ ಚಿತ್ತವನ್ನು ಮೇಲಕ್ಕೆತ್ತಿ ಜೋಗಕ್ಕೆ ನಮ್ಮನ್ನು ಕರೆದೊಯ್ದು ಅದರ ಭವ್ಯ ಸೌಂದರ್ಯ ದರ್ಶನವನ್ನು ಜಾನಪದ ವಾಣಿಯಲ್ಲಿ ಮಾಡಿಸಿದ ರೀತಿಯಲ್ಲಿಯೇ ಒಂದು ಕತೆಯಿದೆ.

———

# ಕಾವ್ಯದಲ್ಲಿ ಚಿತ್ರ ದರ್ಶನ

ಮೇಲೆ ನೋಡೆ ಕಣ್ಣ ತಣಿಪ
ನೀಲ ಪಟದಿ ವಿವಿಧ ರೂಪ
ಜಾಲಗಳನು ಬಣ್ಣಿಸಿರ್ಪ ಚಿತ್ರ ಚತುರನಾರ್
—ಡಿ. ವಿ. ಗುಂಡಪ್ಪ

ನಮ್ಮ ವಿಶ್ವವು ಒಂದು ಮಹಾ ಚಿತ್ರ ಶಾಲೆ. ನಮ್ಮ ಸುತ್ತ, ಮೇಲೆ, ಕೆಳಗೆ ಚಿತ್ರಗಳು ಹಾಸು ಹೊಕ್ಕಾಗಿ ಹೆಣೆದುಕೊಂಡಿವೆ. ಈ ಚಿತ್ರಗಳ ಸೌಂದರ್ಯವನ್ನು ಮಾನಸ ಸರೋವರದಲ್ಲಿ ಬಿಂಬಿಸಿಕೊಂಡು, ಅವುಗಳ ರೂಪರೇಷೆಗಳನ್ನು ಕಲ್ಪನೆಯ ನೆರವಿನಿಂದ ಪುನಃ ಸಂಯೋಜನೆಗೊಳಿಸಿ ಕೊಂಡು ಕಲಾವಿದರು ಅವುಗಳನ್ನು ಸಾಹಿತ್ಯದಲ್ಲಿ, ಶಿಲ್ಪದಲ್ಲಿ ಅಥವಾ ರೇಖಾ ಚಿತ್ರರೂಪದಲ್ಲಿ ಚಿತ್ರಿಸುತ್ತಾರೆ. ಹೀಗೆ ಚಿತ್ರಗಳನ್ನು ಚಿತ್ರಿಸುವಲ್ಲಿ ಆವಶ್ಯಕ ವಾದ ಒಂದು ಪ್ರಚೋದನೆ ಮನುಷ್ಯ ಸ್ವಭಾವದಲ್ಲಿಯೇ ಉಂಟೆಂದು ತೋರುತ್ತದೆ. ಅದೇಕೋ ಏನೋ, ಬಿಂಬಕ್ಕಿಂತಲೂ ಪ್ರತಿಬಿಂಬ ಹೆಚ್ಚು ಆಕರ್ಷಕವಾಗಿ ಕಾಣುತ್ತದೆ. ವೃಕ್ಷಗಳಿಗಿಂತ ಆ ವೃಕ್ಷಗಳ ಛಾಯೆ ತಿಳಿ ಗೊಳದಲ್ಲಿ ಮೂಡಿದಾಗ ನಮಗೆ ಹೆಚ್ಚು ಚಂದ ಕಾಣುವುದೆಂಬುದನ್ನು ನಾವು ಬಲ್ಲೆವು. ಕಂಡ ಚೆಲುವನ್ನು ಕಲ್ಪಿಸಿಕೊಂಡಾಗಂತೂ ನಮ್ಮ ಕಲ್ಪನಾ ಶಕ್ತಿಯ ಬೆಳಕಿನಲ್ಲಿ ದೃಶ್ಯವು ಇಮ್ಮಡಿ ಮುಮ್ಮಡಿ ರಮಣೀಯವಾಗುವುದು. ಮೊದಲು ಪ್ರತ್ಯಕ್ಷ ಕಂಡ ಡ್ಯಾಫೋಡಿಲ್ ಹೂಗಳ ದೃಶ್ಯವನ್ನು ಆ ಬಳಿಕ ಕಲ್ಪನೆಯ ಬೆಳಕಿನಲ್ಲಿ ನೋಡಿ ವರ್ಡ್ಸವರ್ತ ಕವಿ ಅವುಗಳನ್ನು ಸಾವಿರನುಡಿ ಸುಂದರವಾಗುವಂತೆ ತನ್ನ ಕವನದಲ್ಲಿ ರೂಪಗೊಳಿಸಿದ್ದಾನೆ.

ಕಾವ್ಯವು ಚಿತ್ರಗಳನ್ನು ಬಿಡಿಸುವುದು ಭಾಷೆಯ ಮಾಧ್ಯಮದಲ್ಲಿ. ಭಾಷೆಗೊಂದು ಮೋಹಿನೀಶಕ್ತಿಯುಂಟು. ಭಾಷೆಯ ಬೆಳುದಿಂಗಳಲ್ಲಿ ಮಂಜಿನ ಹನಿ ಮುತ್ತಾಗುತ್ತದೆ. ಹುಲ್ಲಿನ ಗುಡಿಸಲು ಬೆಳ್ಳಿಯ ಗುಡಿ

ಸಲವಾಗುತ್ತದೆ. ಒಂದು ಸಾಮಾನ್ಯವಾದ ಹೂದೋಟವು ನಂದನವಾಗಿ ಪರಿಣಮಿಸುತ್ತದೆ. ಕಲ್ಲಿನಲ್ಲಿ ಕಟೆಯಲಾಗದ, ಕುಂಚದಿಂದ ಎಳೆಯಲಾಗದ ಚಿತ್ರವು ಕವಿ ಭಾಷೆಯಲ್ಲಿ ಅರಳುತ್ತದೆ; ಕಲ್ಪನೆಯನ್ನು ಕೆರಳಿಸುತ್ತದೆ. ಇಷ್ಟೇ ಅಲ್ಲ; ಇಂತೆಂದು ನುಡಿಯಲಾಗದುದನ್ನು ಸೂಚ್ಯವಾಗಿ ಸುಳುವು ಗಾಣಿಸುತ್ತದೆ.

ನಾದವು ಕಿವಿಯಿಂದ ಕೇಳಿ ತಿಳಿಯಬಹುದಾದ ವಿಷಯವಷ್ಟೇ? ಕಣ್ಣಿಗೆ ಕಾಣದ ವಸ್ತುವದು. ಆದರೆ ಕವಿ ಅದನ್ನು ತನ್ನ ಕವನದಲ್ಲಿ ರೂಪಿಸಬಲ್ಲನು. ಹೀಗೆ :

ಹಾಸಾದ ಹಾಡಿಗೆ ಹೊಕ್ಕಾತು ಕಿನ್ನರಿ
ನೆಯ್ಗಿಯೊಳಗೆ ನೂಲು ಹೋಧಾಂಗ
ಜೀವನದ ರಸ ಹಿಂಡಿ ತುಂತುರು ಮಳೆಯಾಗಿ
ತಂತಿಯು ತುಂಬೆಲ್ಲ ನಿಡಿಧಾಂಗ.

—ಬೇಂದ್ರೆ

ಕಾವ್ಯದಲ್ಲಿ ಸೇರಿರತಕ್ಕ ಅಂಶಗಳು ಮುಖ್ಯವಾಗಿ ಎರಡು: ಒಂದು ಚಿತ್ರ; ಇನ್ನೊಂದು ನಾದ. ಇವೆರಡವನ್ನು ಸರಿಯಾಗಿ ಮೈಗೂಡಿಸಿ ಕೊಂಡಾಗ ಕಾವ್ಯವು ಕಾವ್ಯವಾಗುತ್ತದೆ; ಕಲೆಯು ಕಳೆಯನ್ನು ಪಡೆಯುತ್ತದೆ. ಕಾವ್ಯದಲ್ಲಿ ಮೂಡಿದ ಚಿತ್ರ ನಾದದಿಂದ ಮಧುರವಾಗತ್ತದೆ. ಚಿತ್ರದ ಸಂಪರ್ಕದಿಂದ ಕಾವ್ಯವದಲ್ಲಿ ನುಡಿದ ನಾದ ಅರ್ಥವತ್ತಾಗುತ್ತದೆ. ಬಗೆ ಗಣ್ಣಿನ ಮುಂದೆ ಶಬ್ದ ಚಿತ್ರವನ್ನು ಕಟ್ಟಿದ ಕವನ ಹೆಸರಿಗೆ ಮಾತ್ರ ಕವನ.

**ವಾಸ್ತವ ಚಿತ್ರ:—**

ಶಬ್ದ ಚಿತ್ರಗಳಲ್ಲಿ ಕೆಲವೊಂದು ಪ್ರಕಾರಗಳನ್ನು ಹೇಳಬಹುದು. ಅವು ಗಳಲ್ಲಿ ವಾಸ್ತವ ಚಿತ್ರ ಒಂದು. ಸ್ವಭಾವೋಕ್ತಿ ಅಲಂಕಾರವೆಂಬ ಒಂದು ಅಲಂಕಾರವಿದೆ. ವಾಸ್ತವ ಚಿತ್ರಕ್ಕೂ ಸ್ವಭಾವೋಕ್ತಿ ಅಲಂಕಾರಕ್ಕೂ ತೀರ ಹತ್ತಿರದ ಸಂಬಂಧ ವಸ್ತುವನ್ನು ಇದ್ದಕ್ಕಿದ್ದ ರೀತಿಯಯಲ್ಲಿ ಚಿತ್ರಿಸುವ ಶಬ್ದ ಚಿತ್ರವೇ ಚಿತ್ರ. ವಾಸ್ತವ ಚಿತ್ರದಲ್ಲಿ ಕವಿ ನಿಜವಾಗಿಯೂ ಚಿತ್ರಕಾರನ ಜಾಣ್ಮೆಯನ್ನು ತೋರಿಸಬೇಕಾಗುತ್ತದೆ. ನಮ್ಮ ಹಳೆಯ ಕಾವ್ಯಗಳಲ್ಲಿ ಕೂಡ

ಕೆಲವೊಂದು ವಾಸ್ತವ ಶಬ್ದ ಚಿತ್ರಗಳುಕಾಣುತ್ತವೆ. ಅವು ವಿಪುಲವಾಗಿಲ್ಲ ವೇನೋ ನಿಜ; ಆದರೆ ಮೆಚ್ಚತಕ್ಕಂಥವಾಗಿವೆ. ಉದಾಹರಣೆಗಾಗಿ ಈ ಪದ್ಯವನ್ನು ಗಮನಿಸಬೇಕು.

ವಳಿಗಳಳಿಯೆ ಬಿಂಕಂ ಚಿತ್ತ ವೃತ್ತಸ್ತನಂ ಕಣ್
ಗೊಳಿಸೆ ಚಲಿಸೆ ಬಾಹಾಮೂಲಮೂರುದ್ವಯಂ ಸಂ-
ಚಳಿಸೆ ನಿಜಪದಾಂಗುಷ್ಠಾಗ್ರದಿಂ ನಿಂದು ಕಣ್ಗಳ್
ಪೊಳೆಯೆ ಮಿಳಿರ್ವ ಕೊಂಬಂ ನಿಕ್ಕಿ ಪೂಗೊಯ್ವಳೊರ್ವಳ್

ಇದೊಂದು ಹೂವೆತ್ತುವ ತರುಣಿಯ ಚಿತ್ರ. ಅವಳು ನಿಂತ ನಿಲವು, ನೋಡಿದ ನೋಟ, ಮಾಡಿದ ಮಾಟ— ಇವೆಲ್ಲ ಚಿತ್ರಿತವಾಗಿವೆ ಇಲ್ಲಿ. ತನ್ನ ವರ್ಣಕುಂಚದಿಂದ ನಾಲ್ಕಾರೇ ರೇಷೆಗಳನ್ನೆಳೆದು ಒಂದು ಅಂದವಾದ ಚಿತ್ರವನ್ನರಳಿಸಿದ್ದಾನೆ. ಕುಶಲಕಲಾವಿದನಾದ ಕವಿಯಿಲ್ಲಿ.

ನಮ್ಮ ಹೊಸ ಕವನಗಳಲ್ಲಿಯೂ ಈ ಬಗೆಯ ಶಬ್ದಚಿತ್ರಗಳು ಅಲ್ಲಲ್ಲಿ ಮೂಡಿವೆ. ಇಂದಿನ ಕವಿಗಳ ದೃಷ್ಟಿ ವಾಸ್ತವದತ್ತ ಒಲಿದಷ್ಟೂ ಒಳಿತು. ಉದಾಹರಣೆಗಾಗಿ ಒಂದು ಶಬ್ದ ಚಿತ್ರ:—

ಹೂವು ಹೂವಿಗೆ ಕೈಯ ಕುಲುಕಿಸಿ
ನೊಸಲ ನೊಸಲಿಗೆ ಸೋಕಿಸಿ
ನೂರು ಪಾತರಗಿತ್ತಿ ಕುಣಿದಿವೆ.
ಮೈಗೆ ಮೈಯನು ಪುಂಬಕಿಸಿ
ಹೂಬಿಸಿಲು ಸುಸಿಲಾಟವಾಡಿದೆ
ಕೆನ್ನೆ ಕೆನ್ನೆಗೆ ತಾಕಿಸಿ
ನೋಡ ಬಂದಿವೆ ನೋಡ ಬಂದಿವೆ
ಮುತ್ತು ಹನಿಗಳ ಚಿಮುಕಿಸಿ

—ಚೆನ್ನವೀರ ಕಣವಿ

## ಉಪಮಾ ಚಿತ್ರ :—

ಶಬ್ದಚಿತ್ರಗಳಲ್ಲಿ ಇನ್ನೊಂದು ರೀತಿಯೆಂದರೆ ಉಪಮಾ ಚಿತ್ರ. ಉಪಮೆಯು ಒಂದು ವಸ್ತುವನ್ನು ಇನ್ನೊಂದು ವಸ್ತುವಿನ ಛಾಯೆಯಲ್ಲಿ ಚಿತ್ರಿಸುತ್ತದೆ. ಒಂದು ಉದಾಹರಣೆ :

ಓಸರಿಸೆ ಸಂಜೆ ಜವನಿಕೆ
ಯೋಸರಿಸಿದ ತೆರದೆ ರಾತ್ರಿ ನರ್ತಕಿ ಪುಗುತಂ
ಸೂಸಿದ ಪುಷ್ಪಾಂಜಲಿಯೆನೆ
ಭಾಸಿಸಿದುವು ಗಗನ-ರಂಗದೊಳ್ ತಾರಕಿಗಳ್

ಉಪಮಾ ಚಿತ್ರಕ್ಕೆ ಹೊಸಗನ್ನಡ ಕವಿತೆಯಿಂದ ಆಯ್ದ ಉದಾರಣೆ:—

ಆಲ್ನಲ್ ಕಮಲದ್ ಊ ತೇಲ್ಬುಟ್ಟು
ಮೇಲೊಂದ್ ತೆಳ್ನೆ ಲೇಪ
ಚಿನ್ನದ್ ನೀರ್ನಲ್ ಕೊಟ್ಟಂಗೈತೆ
ನನ್ ಪುಟ್ನಂಜೀ ರೂಪ !

—ರಾಜರತ್ನಂ (ರತ್ನನ ಪದಗಳು)

ಇಲ್ಲಿ ಚಿತ್ರಿಸಬೇಕಾದ ವಸ್ತು 'ಪುಟ್ನಂಜೀ ರೂಪ'. ಕವಿ ಅದನ್ನು ಕಮಲದ ಹೂವಿನ ಛಾಯೆಯಲ್ಲಿ ಚಿತ್ರಿಸಿದ್ದಾನೆ. ಹಾಲಿನಲ್ಲಿ ಕಮಲದ ಹೂವನು, ತೇಲಬಿಟ್ಟು ಅದಕ್ಕೆ ಚಿನ್ನದ ನೀರಿನ ತಿಳಿ ಲೇಪವನ್ನು ಕೊಟ್ಟರೆ ಹೇಗೆ ತೋರಬಹುದೋ ಹಾಗಿದೆ ಪುಟ್ಟ ನಂಜಿಯ ರೂಪ !

**ರೂಪಕ ಚಿತ್ರ :**

ರೂಪಕವು ಎರಡು ಭಿನ್ನ ವಸ್ತುಗಳನ್ನು ಏಕರೂಪಗೊಳಿಸುತ್ತದೆ. ಉಪಮೆಯ ಮುಂದಿನ ಹೆಜ್ಜೆ ಇದು. ಉಪಮೆಯಲ್ಲಿ ಬೇರೆ ಬೇರೆ ಯಾಗಿದ್ದು ಒಂದು ಇನ್ನೊಂದಕ್ಕೆ ಬಣ್ಣ, ಬೆಳಕು, ಬೆಡಗುಗಳನ್ನು ನೀಡುವ ವಸ್ತುಗಳು ರೂಪಕದಲ್ಲಿ ಒಂದುಗೂಡುತ್ತವೆ. ಕವಿಯ ಪ್ರತಿಭೆ ಥಳ್ಳನೆ ಬೆಳಗುವುದು ರೂಪಕದಲ್ಲಿ. ರಸನಿಮಿಷದಲ್ಲಿ ಕವಿಯ ಕಲ್ಪನೆಗೆ ಥಳ್ಳನೆ ಹೊಳೆಯುವ ರೂಪಸಾದೃಶ್ಯವೇ ರೂಪಕ. ನಮ್ಮ ಪುರಾತನ ಹಾಗೂ ನೂತನ ಕಾವ್ಯಗಳಲ್ಲಿ ರೂಪಕ ಚಿತ್ರಗಳು ವಿಪುಲವಾಗಿ ದೊರೆಯುತ್ತವೆ.

ಹಳಗನ್ನಡ ಕಾವ್ಯದಿಂದ ಆರಿಸಿದ ರೂಪಕಚಿತ್ರ.

ಮುಗಿದುವು ನಯನ ಸರೋಜಂ
ಮಿಗೆಯಲರ್ದುದು ಚಿತ್ತಕೈರವಂ ಮಿಕ್ಕೇರಿ
ತ್ತು ಗಭೀರ ತಪೋವಾರಿಧಿ
ಬಗೆಯೊಳಗಾ ಧ್ಯಾನ-ಚಂದ್ರನುದಯಿಸುವಾಗಳ್

—ಹರಿಹರ (ಗಿರಿಜಾಕಲ್ಯಾಣ)

ರೂಪಕದ ರೀತಿಯಲ್ಲಿ ರೇಖಿಸಿದ ರಮ್ಯ ಚಿತ್ರವಿದು. ಪರಮಾತ್ಮ ನಿಗಾಗಿ ತಪಸ್ಸು ಮಾಡುತ್ತಿದ್ದ ಪಾರ್ವತಿಯ ಧ್ಯಾನವು ಇಲ್ಲಿ ಚಿತ್ರಿತವಾಗಿದೆ. ಧ್ಯಾನವೆಂಬ ಚಂದ್ರ ಮೂಡಿದುದರಿಂದ ಪಾರ್ವತಿಯ ಹರಣ ಕರಣಗಳಲ್ಲಿ ಉಂಟಾದ ಪರಿಣಾಮವೆಲ್ಲ ಇಲ್ಲಿ ರೂಪಕವಾಗಿ ಮೈದೋರಿದೆ. ನಿಜವಾದ ಧ್ಯಾನದಲ್ಲಿದ್ದ ವ್ಯಕ್ತಿಯ ನೋಟ ಒಳಗೆ ಹರಿಯುವುದೂ, ಚಿತ್ತ ಅರಳು ವುದೂ ಸ್ವಾಭಾವಿಕ. ಈ ಸಂಗತಿಯನ್ನು ಕವಿ ರೂಪಕಕ್ಕೆ ತಿರುಗಿಸಿಕೊಂಡು ಕಣ್ಣೆಂಬ ಕಮಲ ಮುಚ್ಚಿಕೊಂಡದ್ದನ್ನೂ ಚಿತ್ತವೆಂಬ ನೈದಿಲೆ ಅರಳಿದು ದನ್ನೂ ಗಭೀರ ತಪವೆಂಬ ಸಮುದ್ರ ಉಕ್ಕೇರಿದುದನ್ನೂ ಧ್ಯಾನವೆಂಬ ಚಂದ್ರ ಉದಯಿಸಿದುದನ್ನೂ ಒಟ್ಟಾರೆ ಒಂದು ರೂಪಕದಲ್ಲಿ ರೇಖಿಸಿದ್ದಾನೆ.

ಹೊಸ ಕವನಗಳಲ್ಲಿ ರೂಪಕ ಚಿತ್ರಗಳು ಸಾಕಷ್ಟು ಮೈದೋರಿವೆ. ಪ್ರಕೃತಿಯ ವಿವಿಧ ದೃಶ್ಯಗಳನ್ನು ರೂಪಕಗಳಲ್ಲಿ ಹೊಸ ಕವಿಗಳು ಚಿತ್ರಿಸಿದ್ದಾರೆ. ಇಂಥ ಕೆಲವು ಚಿತ್ರಗಳನ್ನು ಇಲ್ಲಿ ಕೊಡಲಾಗಿದೆ.

ಹಸುರಿನುಯ್ಯಾಲೆಯಲಿ
ಬಿಸಿಲು ತೂಗಾಡುತಿದೆ

—ಕುವೆಂಪು

ಮೂಡು ಬೆಳಕಿನ ಹೆಡೆಯು ತೆರೆಯಿತು
ಕೆರಳಿದಿರುಳಿನ ನಾಗರ!

—ಜಿ. ಎಸ್. ಶಿವರುದ್ರಪ್ಪ

ಮುಗಿಲ ಮಾರಿಗೆ ರಾಗ ರತಿಯು ನಂಜ ಏರಿತ್ತ
ಆಗ ಸಂಜೆಯಾಗಿತ್ತ

—ಬೇಂದ್ರೆ

ತಿಳಿ ಮುಗಿಲ ತೊಟ್ಟಿಲಲಿ
ಮಲಗಿದ್ದ ಚಂದಿರನ
ಗಾಳಿ ಜೋಗುಳ ಹಾಡಿ
ತೂಗುತಿತ್ತು.

—ಎಸ್. ವಿ. ಪರಮೇಶ್ವರ ಭಟ್ಟ

ಹುಬ್ಬು ಹಾರಿಸುತಿಹುದು ಮಿಂಚಿನಲಿ ಮೋಡ
ಶೃಂಗಾರ ಚೇಷ್ಟೆಯಿದು ಯಾರ ಕೂಡ?

—ಕಾವ್ಯಾನಂದ

ಭಾವಗೀತಗಳ ಕೇಂದ್ರವಾದ ಭಾವ ನಮ್ಮ ಹಿಡಿತಕ್ಕೆ ಸಿಕ್ಕಬೇಕಾದರೆ, ಕಾವ್ಯರಸದ ಅನುಭವವಾಗಬೇಕಾದರೆ, ಭಾವದ ಶರೀರವಾಗಿ ಚಿತ್ರ ಕಣ್ಮುಂದೆ ನಿಲ್ಲಬೇಕು. ಆ ಚಿತ್ರಕ್ಕೆ ಒಂದು ಹಿನ್ನೆಲೆ ಬೇಕು. ಅವೆರಡರ ಸಂಯೋಗದಿಂದ ಭಾವ ಹೊಮ್ಮಬಹುದು; ರಸ ಚಿಮ್ಮಬಹುದು.

— — — —

# ಕುವೆಂಪು-ಗೀತ-ರಹಸ್ಯ

ವಿಶ್ವದ ರಹಸ್ಯ ಲಯ ( rhythm ) ದಲ್ಲಿದೆ. ಪ್ರಕೃತಿ ಜೀವ ಹಾಗು ಮಾನವ ಜೀವನ—ಇವೆರಡರಲ್ಲಿಯೂ ಲಯವಿನ್ಯಾಸವೇ ಗೋಚರ ವಾಗುತ್ತದೆ. ಜೀವನವನ್ನು ಪ್ರತಿಬಿಂಬಿಸುವ ಕಲೆಗಂತೂ ಲಯವೇ ಜೀವನಾಡಿ. ಚಿತ್ರಕಲೆಯಲ್ಲಿ ಗೆರೆಗಳ ಹಾಗು ಬಣ್ಣಗಳ ವಿನ್ಯಾಸ ಮಾಡಿ ದ್ದರೆ ಸಂಗೀತದಲ್ಲಿ ಸ್ವರವಿನ್ಯಾಸದಿಂದುಂಟಾಗುವ ಲಯವು ಲಾಸ್ಯವಾಡು ತ್ತದೆ. ಕಾವ್ಯವು ಕಲೆಗಳಲ್ಲಿ ಶ್ರೇಷ್ಠ ಕಲೆ. ಕಾವ್ಯದಲ್ಲಿ ಭಾವಲಯವು ಸ್ಪಂದಿಸುವಂತೆ ನಾದಲಯವೂ ಸ್ಪಂದಿಸುತ್ತದೆ. ಸಂಗೀತದಲ್ಲಿ ಸ್ವರನರ್ತಕಿ ನರ್ತಿಸಿದರೆ ಕಾವ್ಯದಲ್ಲಿ ಛಂದೋನಟಿ ನಾಟ್ಯವಾಡುತ್ತಾಳೆ. ಕವಿ ಕುವೆಂಪು ಅವರ ಕಲ್ಪನಾ ರಂಗದಲ್ಲಿ ನಾಟ್ಯವಾಡಿದ ಛಂದೋನಟಿಯ ವಿಲಾಸ ವಿಭ್ರಮಗಳನ್ನು ವಿವರಿಸುವುದು ಈ ಬರೆಹದ ಗುರಿ.

ಕುವೆಂಪು ಮಹಾಛಂದಸ್ಸಿನಲ್ಲಿ ಮಹಾಕಾವ್ಯ ಬರೆದಿದ್ದಾರೆ. ಸುದೀರ್ಘ ವಾದ ಕಾದಂಬರಿಯೊಂದರ ಉದ್ದಕ್ಕೂ ಅವರ ಪ್ರತಿಭೆ ಮೂಡಿದೆ. ಸಣ್ಣ ಕಥೆಗಳಲ್ಲಿ ಅವರ ಕೈ ಆಡಿದೆ. ವಿಮರ್ಶಾ ಲೇಖನಗಳೂ ಅವರ ಲೆಕ್ಕಣಿಕೆ ಯಿಂದ ಇಳಿದು ಬಂದಿವೆ; ಮಲೆನಾಡಿನ ಚಿತ್ರಗಳು ಅರಳಿ ಬಂದಿವೆ. ಕನ್ನಡ ಸಾಹಿತ್ಯದ ವಿವಿಧ ಅಂಗಗಳಲ್ಲಿ ಅವರು ರಂಗವಲ್ಲಿಯನ್ನು ಹೊಯ್ದಿದ್ದಾರೆ. ಆದರೆ ಭಾವಜೀವಿಯಾದ ಕುವೆಂಪು ಪ್ರಾಮುಖ್ಯವಾಗಿ ಭಾವಗೀತಕಾರ. ಇಂದಿನ ಕನ್ನಡ ಭಾವಗೀತಗಳಲ್ಲಿ ತೋರಿಬರುವ ಎರಡು ಮಾರ್ಗಗಳಲ್ಲಿ ಒಂದರ ಪ್ರವರ್ತಕರು ಕುವೆಂಪು. ಬಂಧುರ ಶೈಲಿ ಹಾಗು ಮಧುರ ನಾದ ಇವು ಆ ಮಾರ್ಗದ ವೈಶಿಷ್ಟ್ಯಗಳು.

ಕನ್ನಡ ಗೀತಗಳಲ್ಲಿ ಶೈಲಿಗೆ ಗಾಂಭೀರ್ಯ ಹಾಗು ನಾದಕ್ಕೆ ಉತ್ಸಾಹ ವುಂಟಾಗುವುದು ಸಾಮಾನ್ಯವಾಗಿ ಸಂಸ್ಕೃತ ಶಬ್ದಗಳ ಸಮಾವೇಶದ ಪರಿಣಾಮವಾಗಿ. ಅಚ್ಚಗನ್ನಡ ಶಬ್ದಗಳಿಗೆ ಅವುಗಳದೇ ಆದ ಒಂದು ಬೆಡಗು ಉಂಟು. ಅವು ಹಾಸುಹೊಕ್ಕಾಗಿ ಸೇರಿದ ಹಾಡುಗಳು ಇಂಪು ಸೊಂಪುಗಳನ್ನು ಸೂಸಬಲ್ಲವು. ಅಂಬಿಕಾತನಯದತ್ತರ ಹಾಗು ಬಿ.ಎಂ.ಶ್ರೀ. ಅವರ ಗೀತಗಳು ಈ ಮಾತಿಗೆ ಸಾಕ್ಷಿ. ಆದರೆ ಉಕ್ಕುವ ಆವೇಶವನ್ನೂ ನೆನೆಯುವ ಕಲ್ಪನೆಯನ್ನೂ ಅಭಿವ್ಯಕ್ತ ಮಾಡುವ ಗೀತಗಳಿಗೆ ಸಂಸ್ಕೃತ

ಪದಗಳ ಸಮಾವೇಶದಿಂದ ತುಂಬಾ ಸಹಾಯವಾಗುತ್ತದೆ. ಕುವೆಂಪು ಅವರ ಪಾಂಚಜನ್ಯ, ನವಿಲು, ಕೃತ್ತಿಕೆ ಮೊದಲಾದ ಗೀತಸಂಗ್ರಹಗಳನು ಪರಿಶೀಲಿಸಿದರೆ ಈ ಮಾತಿನ ಯಥಾರ್ಥತೆ ಹೊಳೆಯದಿರದು. ನಾದದ ದೃಷ್ಟಿಯಿಂದ ಕುವೆಂಪು ಅವರ ಭಾವಗೀತಗಳು ಕೊಳಲನ್ನೂ ಕೋಗಿಲೆ ಯನ್ನೂ ನೆನಪಿಗೆ ತರುತ್ತವೆ. ಕೊಳಲು ಕೋಗಿಲೆಗಳ ಸ್ವರವು ಎಷ್ಟು ಮಧುರವೋ ಅಷ್ಟೇ ಅವೇಶಪೂರ್ಣವಾದುದು. ಅವುಗಳ ದನಿಯಲ್ಲಿ ಇಂಪೂ ಉತ್ಸಾಹವೂ ಹಿತವಾಗಿ ಕೂಡಿರುತ್ತವೆ. ಹಾಗೆಯೇ ಕುವೆಂಪು ಗೀತಗಳ ನಾದವು ಎಷ್ಟು ಮಧುರವೋ ಅಷ್ಟೇ ಬಂಧುರ. ಈ ದೃಷ್ಟಿ ಯಿಂದ 'ಕೊಳಲು', 'ನವಿಲು' ಮೊದಲಾದ ಅವರ ಗೀತಸಂಗ್ರಹಗಳ ಹೆಸರುಗಳು ಅರ್ಥಪೂರ್ಣವಾಗಿವೆ.

ಕುವೆಂಪು ಅವರ ದೃಷ್ಟಿ ವರ್ಡ್ಸ್‌ವರ್ತ್ ಕವಿಯ ದೃಷ್ಟಿ. ಆದರೆ ಅವರ ಚೈತನ್ಯವು ಷೆಲ್ಲಿಯ ಚೈತನ್ಯವನ್ನು ಹೋಲುವಂಥದು. ಅವರ ದೃಷ್ಟಿಗೆ ಅವರು ಹುಟ್ಟಿ ಬೆಳೆದ ಮಲೆನಾಡಿನ ವಾತಾವರಣ ಕಾರಣವಾಗಿರ ಬಹುದು; ಅವರ ಚೈತನ್ಯಕ್ಕೆ ಅವರ ಮೂಲ ಪ್ರಕೃತಿ ಕಾರಣವೆಂದು ತೋರುತ್ತದೆ. ಅವೆರಡರ ಸಂಗಮ ಅವರ ಭಾವಗೀತಸೃಷ್ಟಿಗೆ ಪ್ರೇರಕ ವಾಗಿದೆಯೆನ್ನಬಹುದು. ಈ ಮಾತಿಗೆ ನಿದರ್ಶನವಾಗಿ ಅವರ 'ನವಿಲಿ'ನಲ್ಲಿ ಸೇರಿದ ಒಂದು ಪದ್ಯವನ್ನು ಇಲ್ಲಿ ಉದ್ಧರಿಸಲಾಗಿದೆ.

ಮೇಲೆ ಗಗನ ನೀಲ ತಲ, ಕೆಳಗೆ ತಿರೆಯು ಹಸುರು ನೆಲ
ಸುಂದರ ಸುರ ತರುಣಿಯೇ
ನಡುವೆ ನೀನು ಮಲೆಯಲಿ ತುಂಗ ಶಿಖರ ಶಿಲೆಯಲಿ
ಹೇ ಅರಣ್ಯ ರಮಣಿಯೇ
ಮಂದ ಪವನ ಬರಲು ಬೀಸಿ
ಅಂಧ ತಿಮಿರ ಕೇಶರಾಸಿ
ನಲಿನಲಿವುದು ಮನ ಮೋಹಿಸಿ
ಹೇ ಮತ್ತಕಾಶಿನಿ !
ಸುನೀಲ ನಯನದಾಳದಲ್ಲಿ
ರಹಸ್ಯ ವಿಶ್ವ ಸ್ವಪ್ನದಲ್ಲಿ
ನಳನಳಿಸಿದೆ ಚೆಲುವ ಚೆಲ್ಲಿ
ಓ ಚಿರವನವಾಸಿನಿ

'ಕಲಾ ಸುಂದರಿಯು ಸರಸಿಯಾದರೂ ಮಹಾ ತಪಸ್ವಿನಿ' ಯೆಂದು ಕುವೆಂಪು ತಮ್ಮ 'ನವಿಲು' ಕವನ ಸಂಗ್ರಹದ ಮುನ್ನುಡಿಯ ಮುನ್ನುಡಿಯಾಗಿ ಹೇಳಿದ್ದಾರೆ. ಅವರ ಕವನಕಲಾಸುಂದರಿ ಸರಿಸಿಯಾದುದು ಬಹುಶಃ ಮಲೆನಾಡಿನ ಚೆಲುವಿನ ಸೋಂಕಿನಿಂದ. ಅವಳು ತಪಸ್ವಿನಿಯಾದದು ಅಂತರಂಗದ ಸತ್ವದಿಂದ.

ಕಾವ್ಯಕಲೆಯ ಅಂತರಂಗವು ಭಾವಲಯ. ಬಾಹ್ಯಾಂಗವು ನಾದಲಯ. ಭಾವಲಯ ಹಾಗು ನಾದಲಯಗಳು ಒಂದೇ ನಾಣ್ಯದ ಎರಡು ಮೈಗಳಿದ್ದ ಹಾಗೆ; ಅಷ್ಟು ಅನ್ಯೋನ್ಯತೆ ಭಾವಲಯ ಹಾಗು ನಾದಲಯುಗಳಲ್ಲಿ ಇದ್ದರೆ ಮಾತ್ರ ಗೀತ ಭಾವಗೀತವಾಗುತ್ತದೆ. ಉತ್ತಮವಾದ ಭಾವಗೀತದಲ್ಲಿ ಭಾವವನ್ನನುಸರಿಸಿ ನಾದ ಹೆಜ್ಜೆ ಚೆಲ್ಲುತ್ತದೆ. ನಾದದ ನೃತ್ಯ ಕುವೆಂಪು ಅವರ ಗೀತಗಳಲ್ಲಿ ಸಹಜವಾಗಿ ಗಮನಕ್ಕೆ ಬರುತ್ತದೆ. ಭಾವದ ಬಳಿವಿಡಿದು ಕಲ್ಪನೆಯ ಕೈಹಿಡಿದು ನಾದ ಸ್ಫೂರ್ತಿಸುತ್ತ ಬಂದಿದೆ ಅವರ ಗೀತಗಳಲ್ಲಿ. ಕೊಳಲು, ನವಿಲು, ಪಕ್ಷಿಕಾಶಿ, ಕೋಗಿಲೆ, ಕಿಂಕಿಣಿ ಇವೇ ಮೊದಲಾದ ಅವರ ಕವನ ಸಂಕಲನಗಳ ಹೆಸರುಗಳು ಉತ್ಸಾಹವನ್ನೂ ನಾದದ ನೃತ್ಯವನ್ನೂ ಸೂಚಿಸುತ್ತವೆ. ಕುವೆಂಪು ಅವರ ಕವಿತೆಗಳಲ್ಲಿ ಉತ್ಸಾಹದ ಕೊಳಲು ನುಡಿಯುತ್ತದೆ. ಕಲ್ಪನೆಯ ನವಿಲು ಕುಣಿಯುತ್ತದೆ; ಕೌತುಕದ ಪಕ್ಷಿ ಉಡ್ಡಯಣ ಮಾಡುತ್ತದೆ. ಪ್ರೇಮವು ಕಾಶ್ಮೀರದ ಸೌಂದರ್ಯವಾಗಿ ಪುಟಿಯುತ್ತದೆ.

ಸುಗ್ಗಿಯ ಬನದಲ್ಲಿ ಹೊಸಗಾಳಿ ತೀಡಿದಂತೆ ಆಡುತ್ತದೆ ಅವರ ಭಾವಗೀತಗಳ ಉಸಿರು. ಅದರ ಆಟಕ್ಕೆ ಬನ ಚಿಗುರಿಡುತ್ತದೆ. ಮಲೆನಾಡು ಅವರಿಗೆ ಪಕ್ಷಿ ಕಾಶಿ, ಅದು ನಿಸರ್ಗಕ್ಕೆ ಸಂಕೇತ. ನಿಸರ್ಗವು ಕಾಶಿಯಷ್ಟು ಪವಿತ್ರ ಅವರಿಗೆ. ನಿಸರ್ಗದ ಆವರಣದಲ್ಲಿ ಅವರ ಚೈತನ್ಯ ಪಕ್ಷಿಯಾಗಿ ಆಡುತ್ತದೆ; ಹಾಡುತ್ತದೆ. ಅವರ ಆ ಅನುಭವವು ಅವರ ಒಂದು ಕವನದಲ್ಲಿ ಹೀಗೆ ಅಭಿವ್ಯಕ್ತವಾಗಿದೆ.

ಪ್ರಭು ವಸಂತನೋಲಗದಲಿ
ಮಧುರ ಜಟಿಲ ಕೂಜನದುಲಿ
ಚೋರೆ, ತೇನೆ, ಲಾವುಗೆ, ಗಿಳಿ
ಗಾನ ಗೈಯೆ ಮೇಲದಿ
ನಾದಶೀಲ ಲೋಲ ಅಳಿ
ಗಾನವಾಗೆ ಜೋಗುಳದುಲಿ
ಮನವೆ ತೂಗಿ ಆಡಿ ನಲಿ
ಬಕುಲ ಕುಸುಮ—ದೋಲದಿ

—'ಉಷೆಯು ನಿಶೆಯ ಚುಂಬಿಸೆ'

(ನವಿಲಿನಿಂದ)

ಕನ್ನಡ ಗೀತಗಳಲ್ಲಿ ಸ್ಪಂದಿಸುವ ಲಯಗಳು ಮುಖ್ಯವಾಗಿ ಮೂರು. ಲಲಿತ ಲಯ, ಮಂದಾನಿಲ ಲಯ, ಉತ್ಸಾಹ ಲಯ ಎಂದು ಅವುಗಳಿಗೆ ಹೆಸರುಗಳು ರೂಢವಾಗಿವೆ. ಮಂದಾನಿಲ ಮತ್ತು ಉತ್ಸಾಹ ಲಯಗಳು ಆವೇಶದ ಅಭಿವ್ಯಕ್ತಿಗೆ ಅನುಕೂಲವಾದುವುಗಳು. ಕುವೆಂಪು ಅವರ ಚೈತನ್ಯವು ಆವೇಶಪೂರ್ಣವಾದುದು ಎಂದು ಹೇಳಿಯಾಯಿತಷ್ಟೇ? ಆದುದ ರಿಂದ ಮಂದಾನಿಲ ಮತ್ತು ಉತ್ಸಾಹ ಲಯಗಳು ಕುವೆಂಪು ಚೈತನ್ಯವನ್ನು ವ್ಯಕ್ತಮಾಡಲು ಬಹಳವಾಗಿ ಬಳಕೆಗೊಂಡಿವೆ. ಮಂದಾನಿಲ ಲಯವು ಅವರ ಭಾವಾವೇಶಪ್ರಧಾನವಾದ ಗೀತಗಳಲ್ಲಿ ಹೇಗೆ ನಿರರ್ಗಳವಾಗಿ ಪ್ರವಹಿಸುವುದೆಂಬುದುನ್ನು ನೋಡಬಹುದು:

ಜೀವನ ವನದಲಿ ಕವನ ಮಯೂರಂ
ನಿಖಿಲ ಭುವನ ಜನ ನಯನವಿಹಾರಂ
ಕಲ್ಪನೆ ಕಣ್ಗಳ ಸಾಸಿರ ನೂರಂ
ತೆರೆದು ಕುಣಿವುದಾವೇಶದಲಿ

ಉತ್ಸಾಹವು ನೃತ್ಯಕ್ಕೆ ಸರಿಹೋಗುವ ಲಯ. ನೃತ್ಯಲಯದಲ್ಲಿ ಕುವೆಂಪು ಅವರದು ಎತ್ತಿದ ಕೈ. ಶೃಂಗಾರದ ಆವರಣದಲ್ಲಿ ಕುವೆಂಪು ಅವರು ಭಕ್ತಿ ಹೊಮ್ಮಿದಾಗ ಅದು ಸಾಮಾನ್ಯವಾಗಿ ಉತ್ಸಾಹ ಲಯದಲ್ಲಿಯೇ ಹೊಮ್ಮು ತ್ತದೆ. ಹೀಗೆ:

ನಾನೆ ವೀಣೆ ನೀನೆ ತಂತಿ
ಅವನೆ ವೈಣಿಕ
ಮಿಡಿದನೆನಲು ರಸದ ಹೊನಲು
ಬಿಂದು ಬಿಂದು ಸೇರಿ ಸಿಂಧು
ನಾದರೂಪಕ

—ವೀಣಾಗಾನ (ಪ್ರೇಮಕಾಶ್ಮೀರದಿಂದ)

'ಕೊಳಲಿನ'ಲ್ಲಿ ' ರಾಧೆಯ ಕರೆ ' ' ಕೌಮುದಿ ' 'ಉದಯ', ಬಾ, ಬಾ ' 'ಶರದೃತು ', ' ಸುಗ್ಗಿ ಬರುತಿದೆ '—ಇವೇ ಮೊದಲಾದ ಕವನಗಳಲ್ಲಿ ಉತ್ಸಾಹ ಲಯದ ವಿವಿಧ ಬಂಧಗಳು ಸೊಗಸಾಗಿ ರಚಿತವಾಗಿವೆ. ಮಂದಾನಿಲ ಲಯದಲ್ಲಿ ರಚಿತವಾದ ಕುವೆಂಪು ಗೀತಗಳಲ್ಲಿ ಹೆಚ್ಚಾಗಿ ಸಂಸ್ಕೃತ ಶಬ್ದಗಳು ಸೇರಿದ್ದರೆ ಉತ್ಸಾಹ ಲಯದಲ್ಲಿ ರಚಿತವಾದ ಕುವೆಂಪು ಗೀತಗಳಲ್ಲಿ ಹೆಚ್ಚಾಗಿ ಅಚ್ಚ ಕನ್ನಡ ಶಬ್ದಗಳು ಸೇರಿಕೊಂಡು ಗೀತಕ್ಕೆ ಸೊಬಗನ್ನು ಉಂಟುಮಾಡಿವೆ. ಒಂದು ಉದಾಹರಣೆ:

ಜೊತೆಯಿಲ್ಲದೆ ನನ್ನೊಲಿದೆದೆ
ಕಂಪಿಸುತಿದೆ ಕೂಡು ಬಾ
ಹೊಸ ಹಸುರೆಡೆ ತಿಳಿಗೊಳದೆಡೆ
ನಾನಿನ್ನೆಡೆ ನೀನೆನ್ನೆಡೆ
ಕೂಡು ಬಾ, ಹಾಡು ಬಾ
ಬೇಗ ಬಾ ! ಬಾ ! ಬಾ !

ಬಾ ! ಬಾ ! (ಕೊಳಲಿನಿಂದ)

ಇನ್ನು ಕುವೆಂಪು ಅವರ ಕಾವ್ಯಪ್ರವಾಹವು ತುಂಬಿ ಸುದೀರ್ಘವಾಗಿ ಹರಿಯಬೇಕಾದಾಗ ಅದು ಸರಳ ರಗಳೆಯನ್ನೋ, ಮಹಾಛಂದಸ್ಸನ್ನೋ ಆಯ್ದುಕೊಳ್ಳುತ್ತದೆ. ನೋಡಬೇಕು ಆ ಪ್ರವಾಹದ ಗಂಭೀರ ಗತಿಯನ್ನು:

## ಓ ಮಾಯೆ

ಓ ರತಿಯೆ ಓ ಕಲಾ ಸುಂದರಿಯೆ ನಿರ್ಲಿಪ್ತ
ನಿಶ್ಚಿಂತ ನಿರ್ಗುಣಬ್ರಹ್ಮದಲಿ ಶಕ್ತಿಯಂ
ಸೃಷ್ಟಿಯಾಸಕ್ತಿಯಂ ಕೆರಳಿಸಿದ ಮೋಹಿನಿಯೆ,
ಪ್ರೇಮಸೌಂದರ್ಯರೂಪದ ಸುಳಿದು ವಿಶ್ವಮಂ
ಶುಷ್ಕತಾ ಶೂನ್ಯಕ್ಕೆ ಬಿಡದೆ ಹೊರೆಯುವ ರಸಮೆ
ನಿನ್ನ ಬಂಧುರ ಬಂಧನಾಲಿಂಗನಕೆ ಶಿಲ್ಕಿ
ಶಶಿ ಸೂರ್ಯ ಗ್ರಹಗೋಷ್ಠಿ ತಾರೆಗಳೆ ನಡೆಯುತಿರೆ
ಪೆಣ್ಣೊರ್ವಳೆಂತಪ್ಪುದೊಂದು ಸೋಜಿಗವೇನು?
ಚೈತ್ರೋದಯದ ವಿಪಿನ ಹೃದಯದೊಳ್ ಚೈತನ್ಯ
ಧುನಿಯಾಗಿ ಬೇರು ಬೇರುಗಳಲ್ಲಿ, ಕೊಂಬೆಯಲಿ
ಪರ್ಣವರ್ಣಾಂತರಂಗದಿ, ಮುದ್ದು ಮೊಗ್ಗಿನಲಿ
ಹೂವಿನಲಿ, ಬಳ್ಳಿಯಲಿ ತರುಶರೀರದ ನಾಡಿ
ನಾಡಿಯಲಿ, ಖಗಮೃಗಂಗಳ ಪ್ರಾಣಪಾತ್ರದಲಿ
ತೃಣ ತೃಣಂಗಳ ಜೀವನಾಲವಾಲದಿ ತುಂಬಿ
ಪ್ರವಾಹಿಪಾ ಸ್ಫೂರ್ತಿ ಮಧುರತೆ ನಿರ್ಝರಿಣಿಯಂತೆ
ಚಿತ್ರಾಂಗದೆಯ ಜೀವ ಶೈಲಾಗ್ರದಿಂ ಧುಮುಕಿ
ಹೃದಯ ಗಹ್ವರದಲ್ಲಿ ಪ್ರಣಯ ಪ್ರಪಂಚಮಂ
ಮಥಿಸಿದತ್ತು

—ಚಿತ್ರಾಂಗದಾ

ಗದ್ಯ ಮಾತನಾಡುತ್ತದೆ; ಪದ್ಯ ಹಾಡುತ್ತದೆ, ಎಂದು ಹೇಳುತ್ತಾರೆ. ಉತ್ತಮವಾದ ಗೀತವು ನಾದದ ಮೂಲಕ ತನ್ನ ಭಾವವನ್ನು ಆವಿರ್ಭಾವ ಗೊಳಿಸುತ್ತದೆ. ಈ ದೃಷ್ಟಿಯಿಂದ ಕುವೆಂಪು ಅವರ ಗೀತಗಳನ್ನು ಪರಿಶೀಲಿ ಸಿದರೆ ಅವುಗಳ ರಹಸ್ಯ ಹೊಳೆಯುವುದು.